# ಆಡಿ ಕಲಿಯೋಣ



ಭಾರತ ಜ್ಞಾನ ವಿಜ್ಞಾನ ಸಮಿತಿ

## ಚಿಣ್ಣರ ಮೇಳ ಶೈಕ್ಷಣಿಕ ಸಮಿತಿ

1. ರಾಮಕೃಷ್ಣಪ್ಪ, ಬೋರನ ಕಣಿವೆ, 2. ಎನ್. ಇಂದಿರಮ್ಮ, ಚಿ.ನಾ. ಹಳ್ಳಿ.
3. ಎಂ. ಗಂಗಾಧರಪ್ಪ, ಪೊನ್ನ ಸಮುದ್ರ, 4. ಪಿ.ಕೆ. ಅಬ್ದುಲ್ ಲತೀಫ್, ಕೆಸ್ತೂರು.
5. ಸೈಯದ್ ಮುಜೀಬ್, ತುಮಕೂರು, 6. ಜಿ. ಹನುಮಂತರಾಯ, ತುಮಕೂರು.
7. ಎಫ್.ಸಿ. ಚೇಗರೆಡ್ಡಿ, ರಾಯಚೂರು, 8. ಆರ್. ಭಾಸ್ಕರ್, ಅಮೃತೂರು
9. ಪ್ರೊ॥ ಎಂ. ಆರ್. ನಾಗರಾಜು, ಗೌ॥ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್.
10. ಸಿ. ಯತಿರಾಜು, ಪ್ರಧಾನ ಕಾರ್ಯದರ್ಶಿ, ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ ರಾಜ್ಯ.
11. ಡಾ॥ ಹೆಚ್.ಎಸ್. ನಿರಂಜನಾರಾಧ್ಯ, ಅಧ್ಯಕ್ಷರು, ತುಮಕೂರು ವಿಜ್ಞಾನ ಕೇಂದ್ರ.
12 ಬಿ.ಬಿ. ಹಂಡರಗಲ್, ಬಾಗಲಕೋಟೆ, 13. ಟಿ.ಎನ್. ರಮೇಶ್, ಬೆಳ್ಳಾರ,
14. ಹೆಚ್.ಎಸ್. ರಮೇಶ್, ಬೆಂಗಳೂರು, 15. ಬಿ.ಕೆ. ಸದಾಶಿವು, ಚಿತ್ರದುರ್ಗ.
16. ಈ. ಬಸವರಾಜು, ಸಹ-ಕಾರ್ಯದರ್ಶಿ, ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ ರಾಜ್ಯ.
17. ಸಿ. ಸೌಭಾಗ್ಯ, ಸಮತಾ ರಾಜ್ಯ ಸಂಚಾಲಕರು, ಸಮತಾ ಮಹಿಳಾ ಸಂಘಟನೆ.

## ಭಾರತ ಜ್ಞಾನ ವಿಜ್ಞಾನ ಸಮಿತಿಯ ರಾಜ್ಯ ಪದಾಧಿಕಾರಿಗಳು

| | | |
|---|---|---|
| ಅಧ್ಯಕ್ಷರು | : | ಪ್ರೊ. ಸಿ.ಎನ್.ಆರ್. ರಾವ್, ಎಫ್.ಆರ್.ಎಸ್ |
| ಉಪಾಧ್ಯಕ್ಷರು | : | ಪ್ರೊ. ಎಸ್. ಆರ್. ತೊಂಟದಾರ್ಯ |
| | | ಪ್ರೊ. ಉಡುಪಿ ಶ್ರೀನಿವಾಸ |
| | | ಶ್ರೀಮತಿ ಸಿ. ಸೌಭಾಗ್ಯ |
| | | ...ಮಿ |
| | | ...ಹರ್ |

# ಆಡಿ ಕಲಿಯೋಣ

ಸಂಪಾದಕರು

ಎನ್. ಇಂದಿರಮ್ಮ

ರಾಮಕೃಷ್ಣಪ್ಪ

ಭಾರತ ಜ್ಞಾನ ವಿಜ್ಞಾನ ಸಮಿತಿ

ಭಾರತೀಯ ವಿಜ್ಞಾನ ಮಂದಿರದ ಆವರಣ

ಬೆಂಗಳೂರು - 560 012

**AADI KALIYONA** : for Actvity oriented teaching in Primary Schools,
Publixhed on the occassion of Chinnaramela

1998

Pages : IV + 91

C : Bharat Gyan Vigyan Samithi, Karnataka State

Rs. 25/-

Copies : 1000

Published by **Sri C. Yathiraju**, Secretary,
Bharat Gyan Vigyan Samithi, Indian Institute of Science Campus,
Bangalore- 560012, Ph : 3342384

DTP : Vikas Prienters & DTP Works, Rajajinagar, Bangalore-21





# ಸಂಪಾದಕರ ಮಾತು

ಪ್ರಾಥಮಿಕ ಶಾಲಾ ಶಿಕ್ಷಣಕ್ಕೆ ಹೊಸ ಚೈತನ್ಯ ನೀಡಲು ದೇಶದಲ್ಲೇ ಅತ್ಯಂತ ಯಶಸ್ವಿಯಾಗಿ ನಡೆದ '' ಚಿಣ್ಣರ ಮೇಳ ''ದ ತತ್ವದ ಮೇಲೆಯೇ ಭಾರತ ಜ್ಞಾನ ವಿಜ್ಞಾನ ಸಮಿತಿಯು ಡಿಪಿಇಪಿ ಜಿಲ್ಲೆಗಳಿಗೆ '' ಸುವರ್ಣ ಚಿಣ್ಣರ ಮೇಳ '' ಎಂಬ ಪ್ರಾಥಮಿಕ ಶಾಲಾ ಮಕ್ಕಳಿಗೆ ಉಪಯೋಗವಾಗುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ಈ ಕಾರ್ಯಕ್ರಮದಲ್ಲಿ 10 ವಿಭಾಗಗಳಲ್ಲಿ ಮಕ್ಕಳನ್ನು ಚಟುವಟಿಕೆಗಳಲ್ಲಿ ತೊಡಗಿಸಲಾಗುವುದು.

1. ನಾಡಿನಾಚೆ ಈಚೆ.
2. ನಮ್ಮೂರು.
3. ನಮ್ಮ ಮಾತು.
4. ಮಾಡಿನೋಡು.
5. ನಮ್ಮ ಸುತ್ತಾ ಮುತ್ತಾ.
6. ಆಟಿಕೆ ಮಾಡು.
7. ಗಣಿತದ ಆಟ.
8. ಹಾಡೋಣ.
9. ಕಥೆ ಕಟ್ಟೋಣ.
10. ಆಡಿ ಕಲಿಯೋಣ.

ಐದು ಹೊರಾಂಗಣ ಮತ್ತು ಐದು ಒಳಾಂಗಣ ವಿಭಾಗಗಳಿರುವ ಈ ಕಾರ್ಯಕ್ರಮದಿಂದ ಮಕ್ಕಳ ಕಲಿಕೆಯಲ್ಲಿ ಸುಧಾರಣೆಯಾದೀತೆಂಬ ಆಶಯ ನಮ್ಮದು. 4 ವರ್ಷಗಳ ಅನುಭವದಿಂದ ಕಂಡುಕೊಂಡ ಮತ್ತು ಪ್ರಾಯೋಗಿಕವಾಗಿ ಅಳವಡಿಸಿ, ನಿರೀಕ್ಷಿತ ಫಲಿತಾಂಶವನ್ನು ನೀಡಲಾದ ಚಟುವಟಿಕೆಗಳನ್ನು ಈ ಸಲಹೆಯಲ್ಲಿ ಕೊಡಲಾಗಿದೆ.

ನಮ್ಮ ಸಣ್ಣ ಅನುಭವವನ್ನು ರಾಜ್ಯದ ಡಿಪಿಇಪಿ ಜಿಲ್ಲೆಯ ಮಕ್ಕಳಿಗೆ ಹಂಚಲು, ಕೈಪಿಡಿಯನ್ನು ಬರೆಯುವ ಜವಾಬ್ದಾರಿಯನ್ನು ವಹಿಸಿದ ಸಿ. ಯತಿರಾಜುರವರಿಗೆ, ಸಲಹೆ ನೀಡಿದ ಅಂತೋಣಿಸ್ವಾಮಿ, ಈ ಬಸವರಾಜು ಹಾಗು ನಮ್ಮ ಜೊತೆಯಲ್ಲಿಯೇ ದುಡಿಯುತ್ತಿರುವ ಲೇಖಕ ಗೆಳೆಯರಿಗೆ ನಮ್ಮ ಕೃತಜ್ಞತೆಗಳು.

ಡಿಪಿಇಪಿಯಡಿಯಲ್ಲಿ ಚಿಣ್ಣರ ಮೇಳದ ಜವಾಬ್ದಾರಿಯನ್ನು ನಮ್ಮ ಸಂಘಟನೆಗೆ ವಹಿಸಿದ ಯೋಜನಾ ನಿರ್ದೇಶಕರಾದ ಶ್ರೀಮತಿ ಅನಿತಾ ಕೌಲ್‌ರವರಿಗೆ ನಮ್ಮ ಕೃತಜ್ಞತೆಗಳು ಸಲ್ಲಲೇಬೇಕು.

ಎನ್. ಇಂದಿರಮ್ಮ
ರಾಮಕೃಷ್ಣಪ್ಪ

# ಚಿಣ್ಣರ ಲೋಕ

ಲೋಕ । ಲೋಕ । ಲೋಕ । ಇದು ಚಿಣ್ಣರ ಲೋಕ ।
ಲೋಕ । ಲೋಕ । ಲೋಕ । ಇದು ಚಿಣ್ಣರ ಲೋಕ ।
ಆಡುತಾ । ಕಲಿಯುತಾ । ನಲಿಯುವ ಲೋಕ ।
ಇದು ಸುಂದರ ಲೋಕ । ಇದು ಸುಂದರ ಲೋಕ ॥ ಹ ॥

ಇಲ್ಲಿ ಇಲ್ಲ ಮಗುವಿಗೆ ಎಂದೂ । ಮಾತಿನ ಕೊರೆತ ।
ಆಡುತಾ ಪಾಡುತಾ ಕೂಡುತಾ ಕಲಿವದು । ವಿನೋದ ಗಣಿತ ।
ಪ್ರಯೋಗ ಮಾಡುತಾ । ಪಡೆಯುವ ಜ್ಞಾನ ।
ವಿಜ್ಞಾನವಾಗಲಿ । ಬದುಕಿನ ನಯನಾ . ॥ 1 ॥

ಪುಸ್ತಕದಲ್ಲಿನ ಸಮಾಜಶಾಸ್ತ್ರವ । ಓದಲೆ ಬೇಕೆ ?
ಊರನು ತಿರುಗುತ ಕಾಣುವರಲ್ಲಿ । ಜೀವಂತ ಚರಿತೆ ।
ಮಮತೆಯ ತುಂಬಿದ । ತಾಯಿಯ ಭಾಷೆ ।
ಕಲಿವರು ಕಸ್ತೂರಿ । ಕನ್ನಡ ಭಾಷೆ । ॥ 2॥

ಶಾಲೆಗಳಿಲ್ಲಿ ಶಿಕ್ಷೆಯ ವಿಧಿಸುವ । ಜೈಲುಗಳಲ್ಲ ।
ಕಣ್ಣೀರಿಡುವ ಕಂದರು ಎಲ್ಲೂ । ಕಾಣುವುದಿಲ್ಲ ।
ಸಂತಸ ಕಲಿಕೆಯ । ಸಾಕಾರದಲ್ಲಿ ।
ಚಿಣ್ಣರ ಮೇಳದ । ಗೆಲುವಿಹುದಿಲ್ಲಿ ॥ 3 ॥

– ರಾಮಕೃಷ್ಣಪ್ಪ.

# ನಾಡಿನಾಚೆ ಈಚೆ

## (ಸಮಾಜ ವಿಜ್ಞಾನ)

ಈ ವಿಭಾಗದಲ್ಲಿ ಮಕ್ಕಳಿಗೆ ಭಾರತದ ಮತ್ತು ಕರ್ನಾಟಕದ ಪರಿಚಯವನ್ನು ಮಾಡಿಕೊಡಲಾಗುವುದು. ಸ್ವಾತಂತ್ರ್ಯ ಚಳುವಳಿಯ ಪ್ರಮುಖ ಘಟನೆಗಳು ಮತ್ತು ಪ್ರಮುಖ ವ್ಯಕ್ತಿಗಳ ಪರಿಚಯವನ್ನು ಮಕ್ಕಳನ್ನು ಚಟುವಟಿಕೆಗಳಲ್ಲಿ ತೊಡಗಿಸಿ, ಮಾಡಿಕೊಡಲಾಗುವುದು.

**ಬೋಧನಾ ವಿಷಯ** : 1. ಭಾರತದ ಮೇಲ್ಮೈ ಲಕ್ಷಣಗಳು ಮತ್ತು ಗಡಿಗಳು
2. ಕರ್ನಾಟಕದ ಮೇಲ್ಮೈ ಲಕ್ಷಣಗಳು ಮತ್ತು ಗಡಿಗಳು.

**ಅಗತ್ಯ ಸಾಮಗ್ರಿಗಳು** : ಪ್ರತಿ ವಿದ್ಯಾರ್ಥಿಗೆ ಎರಡರಂತೆ ಭಾರತದ ಮತ್ತು ಕರ್ನಾಟಕದ ಗುರುತಿಸಿಲ್ಲದ ರೇಖಾ ನಕ್ಷೆಗಳು, ಪೆನ್ಸಿಲ್/ಸ್ಕೆಚ್ ಪೆನ್

**ಒಳಾಂಗಣ ಚಟುವಟಿಕೆಗಳು** : 1. ಶಿಕ್ಷಕರು ಭಾರತದ ಮೇಲ್ಮೈ ಲಕ್ಷಣಗಳಿರುವ ಭೂಪಟವನ್ನು ತೂಗು ಹಾಕಬೇಕು. ಭಾರತದ ಭೂಪಟದಲ್ಲಿ ಶಿಕ್ಷಕರು ಮುಖ್ಯವಾದ ಮೇಲ್ಮೈ ಲಕ್ಷಣಗಳನ್ನು ತೋರಿಸಬೇಕು. ವಿದ್ಯಾರ್ಥಿಗಳು ಶಿಕ್ಷಕರು ತೋರಿಸಿದ ವಿವರಗಳನ್ನು ತಮ್ಮಲ್ಲಿರುವ ರೇಖಾ ನಕ್ಷೆಯಲ್ಲಿ ಪೆನ್ಸಿಲ್/ಸ್ಕೆಚ್ ಪೆನ್ನುಗಳಿಂದ ಗುರುತಿಸಿಕೊಳ್ಳಬೇಕು. ವಿದ್ಯಾರ್ಥಿಗಳು ಗುರುತಿಸುವಾಗ ಶಿಕ್ಷಕರು ಸಹಾಯಮಾಡಬೇಕು.

2. ಭಾರತದ ರಾಜಕೀಯ ನಕ್ಷೆಯನ್ನು ಶಿಕ್ಷಕರು ತೂಗು ಹಾಕಿ, ಗಡಿಗಳನ್ನು ವಿದ್ಯಾರ್ಥಿಗಳಿಂದ ಬೇರೊಂದು ರೇಖಾ ನಕ್ಷೆಯಲ್ಲಿ ಗುರುತುಹಾಕಿಸಬೇಕು.

3. ಕರ್ನಾಟಕದ ನೈಸರ್ಗಿಕ ಭೂಪಟವನ್ನು ತೂಗುಹಾಕಬೇಕು. ವಿದ್ಯಾರ್ಥಿಗಳು ತಮ್ಮಲ್ಲಿರುವ ಕರ್ನಾಟಕದ ನಕ್ಷೆಯಲ್ಲಿ ಶಿಕ್ಷಕರು ತೋರಿಸುವ ವಿವರಗಳನ್ನು ಗುರುತಿಸಿಕೊಳ್ಳಬೇಕು.

4. ಕರ್ನಾಟಕದ ರಾಜಕೀಯ ಭೂಪಟವನ್ನು ಶಿಕ್ಷಕರು ತೂಗುಹಾಕಬೇಕು. ವಿದ್ಯಾರ್ಥಿಗಳು

ಶಿಕ್ಷಕರು ತೋರಿಸಿದಂತೆ ಗಡಿಗಳನ್ನು ತಮ್ಮಲ್ಲಿರುವ ಕರ್ನಾಟಕದ ಇನ್ನೊಂದು ರೇಖಾ ನಕ್ಷೆಯಲ್ಲಿ ಗುರುತಿಸಿಕೊಳ್ಳಬೇಕು.

ಪ್ರತಿಯೊಂದು ಬಾರಿಯೂ ವಿವರಗಳನ್ನು ಗುರುತುಹಾಕಿಸಿದ ಮೇಲೆ ಶಿಕ್ಷಕರು ಚಿಕ್ಕ ಚಿಕ್ಕ ಪ್ರಶ್ನೆಗಳನ್ನು ಕೇಳಿ, ಭೂಪಟದ ವಿವರಗಳು, ವಿದ್ಯಾರ್ಥಿಗಳಿಗೆ ಮನವರಿಕೆಯಾಗಿರುವುದನ್ನು ಖಚಿತಪಡಿಸಿಕೊಳ್ಳಬೇಕು.

**ಉದಾಹರಣೆ** : ಭಾರತದ ಉತ್ತರಕ್ಕೆ ಏನಿದೆ ?
ಕರ್ನಾಟಕದ ಪಶ್ಚಿಮದಲ್ಲಿ ಏನಿದೆ ? ಇತ್ಯಾದಿ.

## ಬೋಧನಾ ವಿಷಯ : ಸಂಪರ್ಕ ಮತ್ತು ಸಾರಿಗೆ

**ಅಗತ್ಯ ಸಾಮಗ್ರಿಗಳು :** ಪ್ರತಿ ಇಬ್ಬರು ವಿದ್ಯಾರ್ಥಿಗಳಿಗೆ ಒಂದರಂತೆ ಆಟಿಕೆಯ ಟೆಲಿಫೋನ್, (ಬೆಂಕಿಪಟ್ಟಣ ಮತ್ತು ದಾರದಿಂದ ಮಾಡಿದ್ದು)



**ಹೊರಾಂಗಣ ಚಟುವಟಿಕೆಗಳು :**

1. ವಿದ್ಯಾರ್ಥಿಗಳನ್ನು ಎರಡು ಸಾಲಿನಲ್ಲಿ ನಿಲ್ಲಿಸಬೇಕು. ಸಾಲುಗಳು ಎದುರು ಬದುರಾಗಿರಲಿ. ಈಗ ಆಟಿಕೆಯ ಟೆಲಿಫೋನ್ ಬಳಸಿ ಒಬ್ಬ ವಿದ್ಯಾರ್ಥಿ ತನ್ನ ಎದುರು ವಿದ್ಯಾರ್ಥಿಯೊಂದಿಗೆ ಸಂಪರ್ಕಿಸಲಿ, ಮಾತಾಡಲಿ, ಕೇಳಲಿ ಶಬ್ದ ಮಾಡಲಿ ಇತ್ಯಾದಿ.

2. ಶಿಕ್ಷಕರು ವಿದ್ಯಾರ್ಥಿಗಳನ್ನು ವೃತ್ತಾಕಾರವಾಗಿ ಕುಳ್ಳಿರಿಸಬೇಕು. ವೃತ್ತದಲ್ಲಿ ತಾವು ಕುಳಿತುಕೊಳ್ಳಬೇಕು. ಶಿಕ್ಷಕರು ತಮ್ಮ ಎಡಮಗ್ಗುಲಲ್ಲಿ ಕುಳಿತಿರುವ ವಿದ್ಯಾರ್ಥಿಯ ಕಿವಿಯಲ್ಲಿ ಒಂದು ವಿಷಯವನ್ನು ಪಿಸುಮಾತಿನಲ್ಲಿ ಹೇಳುವುದು.

ಉದಾ : ನಾವೆಲ್ಲಾ ಶಾಲೆಯ ಮೈದಾನದಲ್ಲಿ ಕುಳಿತು ಆಡುತ್ತಿದ್ದೇವೆ.

ವಿಷಯವನ್ನು ಕೇಳಿಸಿಕೊಂಡ ವಿದ್ಯಾರ್ಥಿಯು ತನ್ನ ಎಡ ಮಗ್ಗುಲಲ್ಲಿ ಇರುವ ಬೇರೊಬ್ಬ ವಿದ್ಯಾರ್ಥಿಗೆ, ಗುಟ್ಟಾಗಿ ಅದೇ ವಿಷಯವನ್ನು ಹೇಳುವುದು. ಹೀಗೆ ಕಿವಿಯಲ್ಲಿಯೇ ಕೊನೆಯ ವಿದ್ಯಾರ್ಥಿಯವರೆಗೆ ವಿಷಯವನ್ನು ಸಾಗಿಸುವುದು. ಕೊನೆಯ ವಿದ್ಯಾರ್ಥಿಗೆ ತನಗೆ ಮುಟ್ಟಿದ ವಿಷಯವೇನು ? ಎಂಬುದನ್ನು ಶಿಕ್ಷಕರು ಆ ವಿದ್ಯಾರ್ಥಿಯಿಂದ ಜೋರಾಗಿ ಹೇಳಿಸುವುದು. ( ಈ ವಿಷಯ ಮೂಲ ವಿಷಯಕ್ಕಿಂತ ಸ್ವಲ್ಪವಾದರೂ ಬದಲಾವಣೆ ಆಗಿರುತ್ತದೆ)

3. ಚರ್ಚೆ : ಮೊದಲನೆಯ ಆಟದಲ್ಲಿ ಒಬ್ಬರು ಮಾತನಾಡಿದ ವಿಷಯ ದೂರವಾಣಿ ಮೂಲಕ ಸರಿಯಾಗಿ ತಲಪುತ್ತದೆ. ಆದರೆ ಎರಡನೆಯ ಆಟದಲ್ಲಿ ಜನರಿಂದ ಜನರಿಗೆ ಸಾಗುವ ವಿಷಯ ವಿರೂಪಗೊಳ್ಳುತ್ತದೆ - ಈ ವಿಷಯಗಳನ್ನು ವಿದ್ಯಾರ್ಥಿಗಳಿಗೆ ಶಿಕ್ಷಕರು ಮನವರಿಕೆಮಾಡಿಕೊಡುವುದು.

4. ಪತ್ರದ ಮೂಲಕ ಒಂದು ವಿಷಯವನ್ನು ಒಂದು ಊರಿನಿಂದ ಮತ್ತೊಂದು ಊರಿಗೆ ತಲುಪಿಸುವುದು, ಈಗ ಸಾಧ್ಯವಿದೆ ಎಂಬುದನ್ನು ಮನವರಿಕೆ ಮಾಡಿಕೊಡಲು ಶಿಕ್ಷಕರು ವಿದ್ಯಾರ್ಥಿಗಳನ್ನು ಬಳಸಿಕೊಂಡು ಅಂಚೆ ಕಚೇರಿಯ ಆಟವನ್ನು ಆಡಿಸಬಹುದು. ಒಬ್ಬ ವಿದ್ಯಾರ್ಥಿಯು ಕೌಂಟರ್‌ನಲ್ಲಿ ಕುಳಿತಿರುವುದು. ಮೂರು -ನಾಲ್ಕು ಜನ ಕೌಂಟರಿಗೆ ಬಂದು ಹಣವನ್ನು ಕೊಟ್ಟು ಪತ್ರ ಬರೆದು ಪೋಸ್ಟ್ ಡಬ್ಬಕ್ಕೆ ಹಾಕುವಂತೆ ನಟಿಸುವುದು. ಬೇರೊಬ್ಬ ಪೋಸ್ಟ್ ಡಬ್ಬದಲ್ಲಿರುವ ಪತ್ರಗಳನ್ನು ತೆಗೆದು ಒಳಗೆ ಹೋಗಿ ಮುದ್ರೆ ಹಾಕುವಂತೆ ನಟಿಸುವುದು. ನಂತರ ಅವನ್ನು ಚೀಲದಲ್ಲಿ ತುಂಬಿ ಬಸ್ಸು / ರೈಲಿಗೆ ಹಾಕುವಂತೆ ನಟಿಸುವುದು. ( 3-4 ವಿದ್ಯಾರ್ಥಿಗಳು ಸಾಲಾಗಿ ನಿಂತು ಬಸ್ಸು , ರೈಲು ನಿರ್ಮಿಸುವುದು) ಬಸ್ಸು / ರೈಲು ಬೇರೊಂದು ಊರಿಗೆ ಹೋಗುವಂತೆ ನಟಿಸುವುದು. ಅದರಿಂದ ಚೀಲವನ್ನು ತೆಗೆದು ಪತ್ರಗಳ ಮೇಲೆ ಸೀಲು ಹಾಕುವಂತೆ ನಟಿಸಿ, ಇನ್ನೊಬ್ಬ ವಿದ್ಯಾರ್ಥಿ ಜನರಿಗೆ ವಿತರಿಸುವಂತೆ ನಟಿಸುವುದು. ಚಟುವಟಿಕೆಯ ನಂತರ ಅಂಚೆ ಕಚೇರಿಯ ವ್ಯವಸ್ಥೆ ಬಗ್ಗೆ ವಿವರಗಳನ್ನು ಶಿಕ್ಷಕರು ವಿದ್ಯಾರ್ಥಿಗಳಿಗೆ ಸಂವಾದದ ಮೂಲಕ ತಿಳಿಸುವುದು.

**ಒಳಾಂಗಣ ಚಟುವಟಿಕೆಗಳು :** 1. ಲಭ್ಯವಿರುವ ಬೇರೆ ಬೇರೆ ಪತ್ರಿಕೆಗಳನ್ನು ಶಿಕ್ಷಕರ ವೃತ್ತಾಕಾರವಾಗಿ ಕುಳಿತಿರುವ ವಿದ್ಯಾರ್ಥಿಗಳ ಮಧ್ಯದಲ್ಲಿ ಹಾಕುವುದು ಮತ್ತು ಅವುಗಳನ್ ದೈನಂದಿನ, ವಾರ, ಪಾಕ್ಷಿಕ, ಮಾಸಿಕಗಳಾಗಿ ವಿಂಗಡಿಸಿ ಎಂದು ಹೇಳುವುದು ವಿದ್ಯಾರ್ಥಿಗಳನ್ನು ವರ್ಗೀಕರಿಸಿದ ಮೇಲೆ ಪತ್ರಿಕೆಗಳಲ್ಲಿ ಯಾವ ವಿಷಯಗಳಿರುತ್ತವೆಂದ ಶಿಕ್ಷಕರು ವಿದ್ಯಾರ್ಥಿಗಳಿಂದ ಹೇಳಿಸಬೇಕು. ವಿದ್ಯಾರ್ಥಿಗಳಿಗೆ ಹೇಳಲಾಗದಿದ್ದರೆ ವಿದ್ಯಾರ್ಥಿಗಳಕೈಗೆ ಪತ್ರಿಕೆಗಳನ್ನು ಕೊಟ್ಟು ಅವುಗಳನ್ನು ತಿರುವಿ ಹಾಕಿ, ಅವುಗಳಲ್ಲಿ ಯಾ ವಿಷಯಗಳಿವೆ ಎಂಬುದನ್ನು ಕೇಳುವುದು.

2. ಶಿಕ್ಷಕರು ಪತ್ರಿಕೆಗಳ ಪಾತ್ರದ ಬಗ್ಗೆ ವಿವರಗಳನ್ನು ಸಂವಾದದ ಮೂಲಕ ತಿಳಿಸಬೇಕು

3. ವಿದ್ಯಾರ್ಥಿಗಳು ಶಾಲೆಯಿಂದ ಮನೆಗೆ ಬರಲು, ಬೇರೆ ಊರಿಗೆ ಹೋಗಲು ಯಾ ವಾಹನಗಳನ್ನು ಬಳಸುವರು, ಎಂಬುದನ್ನು ಶಿಕ್ಷಕರು ಕೇಳಿ ತಿಳಿದುಕೊಳ್ಳಬೇಕು. ಅಲ್ಲ ವಿದ್ಯಾರ್ಥಿಗಳು ನೋಡಿರುವ ವಾಹನಗಳು ಯಾವುವು ಮತ್ತು ಅವುಗಳನ್ನು ಎ ಬಳಸುತ್ತಾರೆ ಎಂಬುದನ್ನು ವಿದ್ಯಾರ್ಥಿಗಳಿಂದ ಹೇಳಿಸುವುದು. ವಿದ್ಯಾರ್ಥಿಗಳು ಹೇಳಿದಂ ಶಿಕ್ಷಕರು ಕಪ್ಪು ಹಲಗೆಯ ಮೇಲೆ ಬರೆದು ಅವುಗಳನ್ನು ಬೇರೆ ಬೇರೆ ಗುಂಪುಗಳನ್ನಾ ಮಾಡುವಂತೆ ಹೇಳುವುದು - ಉದಾಹರಣೆ ಹೇಳಿಸುವುದು.

1. **ಭೂ ಸಾರಿಗೆ** : ಲಾರಿ , ಬಸ್ಸು , ಕಾರು ಇತ್ಯಾದಿ
2. **ಜಲ ಸಾರಿಗೆ** : ಹಡಗು , ದೋಣಿ ಇತ್ಯಾದಿ
3. **ವಾಯುಸಾರಿಗೆ** : ವಿಮಾನ , ಹೆಲಿಕಾಪ್ಟರ್ ಇತ್ಯಾದಿ







ಬಸ್ಸು, ಲಾರಿ, ಕಾರು ಮುಂತಾದ ವಾಹನಗಳ ಪಾತ್ರಗಳನ್ನು ತೋರಿಸಿ, ಇವು ಯಾವ ವಿಧದ ಸಾರಿಗೆಗೆ ಸೇರುತ್ತವೆ ಎಂಬುದನ್ನು ಶಿಕ್ಷಕರು ವಿದ್ಯಾರ್ಥಿಗಳಿಂದ ಹೇಳಿಸಬೇಕು.

**ಬೋಧನಾ ವಿಷಯ** : ರಾಷ್ಟ್ರನಾಯಕರು, ಕವಿಗಳು, ವಿಜ್ಞಾನಿಗಳು

**ಅಗತ್ಯ ಸಾಮಗ್ರಿಗಳು** : ರಾಷ್ಟ್ರನಾಯಕರು, ಕವಿಗಳು, ವಿಜ್ಞಾನಿಗಳ ಚಿಕ್ಕ ಚಿಕ್ಕ ಭಾವ ಚಿತ್ರಗಳ ( 5 ಜನರ ಗುಂಪಿಗೆ ಒಂದರಂತೆ) ಜೆರಾಕ್ಸ್ ಪ್ರತಿಗಳು, ಪೆನ್ಸಿಲ್‌ಗಳು, ರಬ್ಬರ್‌ಗಳು.

**ಒಳಾಂಗಣ ಚಟುವಟಿಕೆಗಳು** : 1. ಐದು ಜನರ ಗುಂಪುಗಳನ್ನಾಗಿ ವಿದ್ಯಾರ್ಥಿಗಳನ್ನು ಶಿಕ್ಷಕರು ವಿಂಗಡಿಸಬೇಕು. ಪ್ರತಿ ಗುಂಪಿಗೂ ವ್ಯಕ್ತಿಗಳ ಹೆಸರುಗಳಿರುವ ಭಾವ ಚಿತ್ರಗಳ ಜೆರಾಕ್ಸ್ ಪ್ರತಿಯನ್ನು ಕೂಡ ಸರಬರಾಜು ಮಾಡುವುದು 3-5 ನಿಮಿಷ ವಿದ್ಯಾರ್ಥಿಗಳು ನೋಡಲು ಶಿಕ್ಷಕರು ಕಾಲಾವಧಿ ನೀಡಬೇಕು. ಕಾಲಾವಧಿಮುಗಿದ ನಂತರ ಜೆರಾಕ್ಸ್ ಪ್ರತಿಗಳನ್ನು ವಿದ್ಯಾರ್ಥಿಗಳಿಂದ ಹಿಂದಕ್ಕೆ ಪಡೆದು, ಹೆಸರುಗಳಿಲ್ಲದ ಭಾವ ಚಿತ್ರಗಳಿರುವ ಜೆರಾಕ್ಸ್ ಪ್ರತಿಗಳನ್ನು ಪ್ರತಿ ತಂಡದವರಿಗೆ ಒದಗಿಸಿ. ಭಾವ ಚಿತ್ರಗಳ ಕೆಳಗೆ ಹೆಸರುಗಳನ್ನು ಬರೆಯಲು (ಪೆನ್ಸಿಲ್‌ನಿಂದ ) ಸೂಚನೆ ನೀಡಬೇಕು. ವ್ಯಕ್ತಿಗಳ ಹೆಸರುಗಳನ್ನು ಬರೆಯಲು ಸಹ ಕಾಲಾವಧಿ ( 10 ನಿಮಿಷ ) ವನ್ನು ನಿಗದಿಪಡಿಸಬೇಕು.

ಯಾವ ತಂಡ ಹೆಚ್ಚು ವ್ಯಕ್ತಿಗಳ ಹೆಸರನ್ನು ಸರಿಯಾಗಿ ಬರೆದಿರುವುದೋ ಅ ತಂಡ ಗೆಲ್ಲುತ್ತದೆ. ಯಾವ ವ್ಯಕ್ತಿಗಳ ಹೆಸರುಗಳನ್ನು ತಪ್ಪಾಗಿ ಬರೆಯಲಾಗಿದೆ/ ಬರೆಯಲಾಗಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಡಲು ಪ್ರತಿ ತಂಡಕ್ಕೆ ಮೊದಲು ಒದಗಿಸಿದ್ದ ಜೆರಾಕ್ಸ್ ಪ್ರತಿಯನ್ನು ಪುನಃ ಸರಬರಾಜು ಮಾಡಬೇಕು. ವಿದ್ಯಾರ್ಥಿಗಳು ತಪ್ಪಾಗಿ ಬರೆದ ಹೆಸರುಗಳನ್ನು ರಬ್ಬರ್‌ನಿಂದ ಅಳಿಸಿ ಸರಿಯಾದ ಹೆಸರುಗಳನ್ನು ಬರೆದುಕೊಳ್ಳುವಂತೆ ಸಲಹೆ ನೀಡಬೇಕು.

## ಬೋಧನಾ ವಿಷಯ : ಸ್ವಾತಂತ್ರ್ಯ ಹೋರಾಟ

1857 ರಿಂದ 1947ರ ವರೆಗೆ ನಡೆದ ವಿವಿಧ ಹೋರಾಟದ ಘಟನೆಗಳು ಮತ್ತು ಹೋರಾಟ ಮಾಡಿದ ವ್ಯಕ್ತಿಗಳ ಪಾತ್ರಾಭಿನಯವನ್ನು ಮಾಡಿಸಬಹುದು.

ಉದಾ : 1. ಝಾನ್ಸಿರಾಣಿ ಹೋರಾಟ.

2. ಸೈಮನ್ ಕಮಿಷನ್ ವಿರುದ್ಧ ಲಾಲಾ ಲಜಪತ್‌ರಾಯ್ ಪ್ರತಿಭಟಿಸಿದ್ದು.

3. ಭಗತ್‌ಸಿಂಗರನ್ನು ನೇಣುಹಾಕಿದ್ದು.

4. ಅಸಹಕಾರ ಚಳುವಳಿ.

5. ಸ್ವದೇಶಿ ಚಳುವಳಿ.

6. ದಂಡೀ ಯಾತ್ರೆ.

7. ಕ್ವಿಟ್ ಇಂಡಿಯಾ ಚಳುವಳಿ.

8. ಸುಭಾಷ್ ಚಂದ್ರ ಬೋಸರ ಭಾಷಣ, ಇತ್ಯಾದಿ.





ಕರ್ನಾಟಕಕ್ಕೆ ಸಂಬಂಧಿಸಿದಂತೆ, ಕಿತ್ತೂರು ಚನ್ನಮ್ಮ, ಟಿಪ್ಪುಸುಲ್ತಾನ್, ಸಂಗೊಳ್ಳಿ ರಾಯಣ್ಣ, ಶಿವಪುರ ಹೋರಾಟ, ವಿಧುರಾಶ್ವಥದ ಬಲಿದಾನ ಇತ್ಯಾದಿ ದೃಶ್ಯಗಳನ್ನು ವಿದ್ಯಾರ್ಥಿಗಳಿಂದಲೇ ಮಾಡಿಸಬಹುದು.

(ಪಾತ್ರಾಭಿನಯ ಮಾಡಿಸಲು ಶಿಕ್ಷಕರು ವಿದ್ಯಾರ್ಥಿಗಳಿಗೆ ಮೊದಲೇ ತಯಾರಿ ನೀಡಿರಬೇಕು)



# ನಮ್ಮೂರು
## (ಕ್ಷೇತ್ರ ಅಧ್ಯಯನ)

ಈ ವಿಭಾಗದಿಂದ ಮಕ್ಕಳಿಗೆ ಊರಿನ ಪರಿಚಯವಾಗುವುದಲ್ಲದೆ ಅವರಲ್ಲಿ ಸಾಮಾಜಿಕ ಜವಾಬ್ದಾರಿ ಬೆಳೆಯಲು ನೆರವಾಗುವುದು.

**ಬೋಧನಾ ವಿಷಯಗಳು :**

1. ಸಾರ್ವಜನಿಕ ಸೇವಾ ಕೇಂದ್ರಗಳು
2. ಸಾರ್ವಜನಿಕ ಸ್ವತ್ತುಗಳು
3. ವಾಣಿಜ್ಯ ವಹಿವಾಟು

**ಹೊರಾಂಗಣ ಚಟುವಟಿಕೆಗಳು :-**

ತರಗತಿಯ ವಿದ್ಯಾರ್ಥಿಗಳನ್ನು ಶಿಕ್ಷಕರು (3) ಮೂರು ಗುಂಪುಗಳನ್ನಾಗಿ ವಿಂಗಡಿಸುವುದು. ಪ್ರತಿ ಗುಂಪನ್ನು ಗ್ರಾಮ / ಬಡಾವಣೆ / ಮೊಹಲ್ಲಾದಲ್ಲಿರುವ ಬೇರೆ ಬೇರೆ ವಿವರಗಳನ್ನು ಸಂಗ್ರಹಿಸಿ ತರಲು ಸೂಚನೆ ನೀಡುವುದು. ಪ್ರತಿ ಗುಂಪಿನ ಜೊತೆ ಒಬ್ಬರು ಶಿಕ್ಷಕರು ಹೋಗಬೇಕು.

**ಮೊದಲನೆಯ ಗುಂಪು :** ಸ್ಥಳದಲ್ಲಿರುವ ಪಾಠಶಾಲೆ, ಆಸ್ಪತ್ರೆ, ಪಶು ಆಸ್ಪತ್ರೆ, ಬ್ಯಾಂಕು, ಸೇವಾ ಸಹಕಾರ ಸಂಘ, ಹಾಲು ಉತ್ಪಾದಕರ ಸಂಘ, ಮುಂತಾದ ಕೇಂದ್ರಗಳಿಗೆ ಭೇಟಿ ನೀಡಿ ಅಲ್ಲಿನ ಕೆಲವು ವಿವರಗಳನ್ನು ಸಂಗ್ರಹಿಸಬೇಕು ಮತ್ತು ಪ್ರತಿ ವಿದ್ಯಾರ್ಥಿಯ ವಿವರಗಳನ್ನು ತಮ್ಮ ನೋಟ್ ಬುಕ್‌ನಲ್ಲಿ ಬರೆಯಲು ಮೊದಲೇ ತಿಳಿಸಿರಬೇಕು.

**ಉದಾಹರಣೆ :**

1. ಪಾಠ ಶಾಲೆ : ಶಾಲೆಯಲ್ಲಿ ಯಾವ ಯಾವ ತರಗತಿಗಳಿವೆ ?
ಶಾಲೆಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳೆಷ್ಟು ? ತರಗತಿವಾರು.
ಶಾಲೆಯಲ್ಲಿ ಎಷ್ಟು ಶಿಕ್ಷಕರಿದ್ದಾರೆ ?
ಶಾಲೆಯಲ್ಲಿ ಎಷ್ಟು ಕೊಠಡಿಗಳಿವೆ ?
ಶಾಲೆಯಲ್ಲಿ ಎಷ್ಟು ಬೆಂಚುಗಳಿವೆ ? ಕುರ್ಚಿಗಳಿವೆ ? ಇತ್ಯಾದಿ

2. ಆಸ್ಪತ್ರೆ : ಆಸ್ಪತ್ರೆ ಯಾವ ಸಮಯದಲ್ಲಿ ಕೆಲಸ ಮಾಡುತ್ತದೆ ?
ಆಸ್ಪತ್ರೆಯಲ್ಲಿ ಎಷ್ಟು ಜನ ಡಾಕ್ಟರುಗಳು ಇದ್ದಾರೆ ?
ಆಸ್ಪತ್ರೆಯಲ್ಲಿ ಎಷ್ಟು ದಾದಿಯರು/ಸಹಾಯಕರು ಇದ್ದಾರೆ ?
ಆಸ್ಪತ್ರೆಗೆ ಪ್ರತಿ ದಿನ ಎಷ್ಟು ರೋಗಿಗಳು ಬರುತ್ತಾರೆ ?
ಆಸ್ಪತ್ರೆಯಲ್ಲಿ ಹಾಸಿಗೆಗಳಿವೆಯೇ ? ಇದ್ದರೆ ಎಷ್ಟು ಹಾಸಿಗೆಗಳಿವೆ? ಇತ್ಯಾದಿ

3. ಸೇವಾ ಸಹಕಾರ ಸಂಘ : ಸಂಘ ಯಾವ ಸಮಯದಲ್ಲಿ ಕೆಲಸ ಮಾಡುತ್ತದೆ ?
ಎಷ್ಟು ಮಂದಿ ಸಂಘದಲ್ಲಿ ಕೆಲಸ ಮಾಡುತ್ತಾರೆ ?
ಸಹಕಾರ ಸಂಘ ರೈತರಿಗೆ ಯಾವ ರೀತಿಯಲ್ಲಿ ಸಹಾಯಮಾಡಿದೆ?
ಸಂಘ ರೈತರಿಗೆ ಯಾವ ರೀತಿಯ ಸಾಲಗಳನ್ನು ಕೊಟ್ಟಿದೆ ?
ಸಂಘದಲ್ಲಿ ಮಾರಾಟ ಮಳಿಗೆಯಿದ್ದರೆ ಅಲ್ಲಿ ಏನೇನು ದೊರೆಯುತ್ತದೆ ? ಇತ್ಯಾದಿ.

ಹೀಗೆ ಒಂದು ಗಂಟೆ ಕಾಲಾವಧಿಯಲ್ಲಿ ಎಷ್ಟು ಕೇಂದ್ರಗಳಲ್ಲಿ ವಿವರಗಳನ್ನು ಪಡೆಯಲು ಸಾಧ್ಯವೋ ಅಷ್ಟು ಕೇಂದ್ರಗಳಲ್ಲಿ ವಿವರಗಳನ್ನು ಸಂಗ್ರಹಿಸಿ ತರುವುದು.

**ಎರಡನೆಯ ಗುಂಪು :** ಸಾರ್ವಜನಿಕ ಸ್ವತ್ತುಗಳಾದ ರಸ್ತೆಗಳು, ಬೀದಿ ದೀಪಗಳು, ಕೈಪಂಪುಗಳು, ನಲ್ಲಿಗಳು , ಚರಂಡಿಗಳು, ತಂಗುದಾಣ, ಅರಳಿಕಟ್ಟೆ, ರಸ್ತೆ ಬದಿ ಮರ, ಲೈಟ್ ಕಂಬಗಳು ಮುಂತಾದವುಗಳಿಗೆ ಸಂಬಂಧಿಸಿದ ವಿವರಗಳನ್ನು ಸಂಗ್ರಹಿಸಿತರುವುದು.



**ಉದಾಹರಣೆಗಳು :**

1. ರಸ್ತೆಗಳು : ಬೀದಿ ರಸ್ತೆಗಳೆಷ್ಟು ?
ಎಷ್ಟು ರಸ್ತೆಗಳು ಹಾಳಾಗಿಲ್ಲ ?
ಎಷ್ಟು ರಸ್ತೆಗಳು ಗುಂಡಿ ಬಿದ್ದಿವೆ ?
ರಸ್ತೆಗಳು ಏಕೆ ಹಾಳಾಗಿವೆ ? ಇತ್ಯಾದಿ.

2. ಕೈ ಪಂಪುಗಳು : ಎಷ್ಟು ಕೈ ಪಂಪುಗಳಿವೆ ?
ಎಷ್ಟು ಕೈ ಪಂಪುಗಳು ಹಾಳಾಗಿವೆ ?
ಎಷ್ಟು ಕೈ ಪಂಪುಗಳು ಚೆನ್ನಾಗಿವೆ ?
ಕೈ ಪಂಪುಗಳು ಹಾಳಾಗಲು ಕಾರಣಗಳೇನು ? ಇತ್ಯಾದಿ

3. ಚರಂಡಿಗಳು : ಎಲ್ಲಾ ಬೀದಿಗಳಲ್ಲಿ ಚರಂಡಿಗಳಿವೆಯೇ ?
ಚರಂಡಿಗಳಿರುವ ಬೀದಿಗಳಲ್ಲಿ ನೀರು ಸಲಿಸಾಗಿ ಹರಿಯುತ್ತದೆಯೇ ?
ಚರಂಡಿಗಳು ಹಾಳಾಗಿದ್ದರೆ, ಕಾರಣಗಳೇನು ?
ಚರಂಡಿಗಳನ್ನು ಪಂಚಾಯ್ತಿ , ಪುರಸಭೆಯವರು ಚೊಕ್ಕಟ ಮಾಡುತ್ತಾರೆಯೇ ?

ಹೀಗೆ ರಸ್ತೆ ಬದಿ ಮರಗಳು, ಬೀದಿ ದೀಪಗಳು, ಅರಳಿ ಕಟ್ಟೆ ಮುಂತಾದವುಗಳಿಗೆ ಸಂಬಂಧಿಸಿದ ವಿವರಗಳನ್ನು ನಿಗದಿತ ಒಂದು ಗಂಟೆ ಸಮಯದಲ್ಲಿ ಸಂಗ್ರಹಿಸಲು ವಿದ್ಯಾರ್ಥಿಗಳಿಗೆ ತಿಳಿಸಬೇಕು. ಈ ಚಟುವಟಿಕೆಗೆ 2/ 3 ಉಪ - ಗುಂಪುಗಳನ್ನು ಮಾಡಿದರೆ ಉತ್ತಮ. ಆಗ ಎಲ್ಲಾ ಸಾರ್ವಜನಿಕ ಸ್ವತ್ತುಗಳಿಗೆ ಸಂಬಂಧಿಸಿದ ವಿವರಗಳನ್ನು ಸಂಗ್ರಹಿಸಬಹುದು.

**ಮೂರನೇ ಗುಂಪು :** ಸ್ಥಳೀಯ ವಹಿವಾಟು ಕೇಂದ್ರಗಳಾದ ಅಂಗಡಿಗಳು, ಹೋಟೆಲ್‌ಗಳು, ಚಿತ್ರ ಮಂದಿರಗಳು, ಕೋಳಿ ಫಾರಂ, ರೇಷ್ಮೆ ಸಾಗಾಣಿಕೆ, ಕಮ್ಮಾರ, ಚಮ್ಮಾರ, ಸಾರಾಯಿ ಅಂಗಡಿ, ಇತ್ಯಾದಿಗಳಿಗೆ ಭೇಟಿ ನೀಡಿ ವಿವರಗಳನ್ನು ಸಂಗ್ರಹಿಸುವುದು.

**ಉದಾಹರಣೆ :**

1. ಅಂಗಡಿ : ಯಾವ ರೀತಿಯ ಅಂಗಡಿ ? ಚಿಲ್ಲರೆ ಅಂಗಡಿ/ ಪೆಟ್ಟಿಗೆ ಅಂಗಡಿ.
ಯಾವ ವಸ್ತುಗಳನ್ನು ಮಾರುತ್ತಾರೆ ?

ಸಾಮಾನುಗಳನ್ನು ಯಾವ ಊರಿನಿಂದ ತರುತ್ತಾರೆ ?
ಅಂಗಡಿಗೆ ಎಷ್ಟು ಬಂಡವಾಳ ಹಾಕಿದ್ದಾರೆ ?
ಪ್ರತಿದಿನ ಎಷ್ಟು ವ್ಯಾಪಾರ ಆಗುತ್ತದೆ ? ಇತ್ಯಾದಿ.

2. ಹೋಟೆಲ್ : ಯಾವ ವಿಧದ ಹೋಟೆಲ್ ? ಸಸ್ಯಹಾರಿ/ಮಾಂಸಹಾರಿ
ಯಾವ ತಿಂಡಿಗಳು ದೊರೆಯುತ್ತವೆ ?
ಯಾವ ಸಮಯದ ವರೆಗೆ ತೆರೆದಿರುತ್ತದೆ ?
ಎಷ್ಟು ಬಂಡವಾಳ ಹಾಕಲಾಗಿದೆ ?
ಎಷ್ಟು ವ್ಯಾಪಾರವಾಗುತ್ತಿದೆ ? ಇತ್ಯಾದಿ.

ಇತರ ವಹಿವಾಟು ಕೇಂದ್ರಗಳಿಗೂ ಭೇಟಿ ನೀಡಿ ನಿಗದಿತ ಒಂದು ಗಂಟೆಯೊಳಗೆ ವಿವರಗಳನ್ನು ಸಂಗ್ರಹಿಸಿ ತರುವುದು.

**ಒಳಾಂಗಣ ಚಟುವಟಿಕೆ** : ಮೂರು ಗುಂಪಿನವರು ಸಂಗ್ರಹಿಸಿ ತಂದ ವಿವರಗಳನ್ನು ಶಿಕ್ಷಕರು ಆಯಾ ತಂಡದ ನಾಯಕ/ಕಿಯಿಂದ ಓದಿಸಬೇಕು. ವಿವರಗಳನ್ನು ಆಧರಿಸಿ ಶಿಕ್ಷಕರು ಮಕ್ಕಳೊಂದಿಗೆ ಮಾತನಾಡುತ್ತಾ ಸಾರ್ವಜನಿಕ ಸ್ವತ್ತುಗಳನ್ನು ರಕ್ಷಿಸಬೇಕಾದ ಅಗತ್ಯ ಮತ್ತು ವಾಣಿಜ್ಯ ವಹಿವಾಟುಗಳನ್ನು ಬೆಳೆಸಬೇಕಾದುದರ ಬಗ್ಗೆ ವಿವರ ನೀಡುವುದು.



# ನಮ್ಮ ಮಾತು

## (ಕನ್ನಡ ಭಾಷೆ)

ಮೂರು ಮತ್ತು ನಾಲ್ಕನೇ ತರಗತಿಯ ಮಕ್ಕಳಿಗೆ ಭಾಷೆಯ ಬಳಕೆಯನ್ನು ಕ್ರಮಬದ್ಧಗೊಳಿಸುವುದು ಈ ವಿಭಾಗದ ಉದ್ದೇಶ. ಪದರಚನೆ ಮತ್ತು ವಾಕ್ಯ ರಚನೆಗೆ ಒತ್ತು ಕೊಟ್ಟಿರುವುದಲ್ಲದೆ ಪಠ್ಯದಲ್ಲಿನ ಪಾಠ ಮತ್ತು ಪ್ರಶ್ನೆಗಳಿಗೆ ಹೊಸತನವನ್ನು ಕೋರುವ ಪ್ರಯತ್ನವನ್ನು ಮಾಡಲಾಗಿದೆ.

**ಬೋಧನಾ ವಿಷಯಗಳು** : 1. ಪದಗಳ ರಚನೆ , 2. ವಾಕ್ಯ ರಚನೆ

**ಒಳಾಂಗಣ ಚಟುವಟಿಕೆಗಳು** :-

**1. ಪದಗಳ ರಚನೆ:** ವೆಡ್ಡಿಂಗ್ ಕಾರ್ಡಿನ ತುಂಡುಗಳ ಹಿಂಬದಿಯಲ್ಲಿ ಅಕ್ಷರಗಳನ್ನು ಬರೆದು ಶಿಕ್ಷಕರು ಒಂದು ಡಬ್ಬದಲ್ಲಿ ತುಂಬುವುದು. ವೃತ್ತಾಕಾರದಲ್ಲಿ ಕುಳಿತಿರುವ ಮಕ್ಕಳು, ಒಂದೊಂದು ಕಾರ್ಡಿನ ತುಂಡನ್ನು ಎತ್ತಿಕೊಳ್ಳುವಂತೆ ಹೇಳಿ, ಡಬ್ಬವನ್ನು ಮಧ್ಯದಲ್ಲಿಡುವುದು. ಪ್ರತಿ ಮಗುವೂ ಬಂದು ಡಬ್ಬದಲ್ಲಿರುವ ಒಂದು ಕಾರ್ಡನ್ನು ಎತ್ತಿಕೊಂಡು ಹೋಗಿ ಕುಳಿತುಕೊಳ್ಳುವಂತೆ ಶಿಕ್ಷಕರು ಸೂಚನೆ ನೀಡಬೇಕು. ವಿದ್ಯಾರ್ಥಿಗಳೆಲ್ಲರೂ ಕಾರ್ಡನ್ನು ಎತ್ತಿಕೊಂಡ ಮೇಲೆ, ತನಗೆ ಬಂದಿರುವ ಅಕ್ಷರದಿಂದ 5 ನಿಮಿಷ ಕಾಲಾವಧಿಯಲ್ಲಿ ಎಷ್ಟು ಪದಗಳನ್ನು ಮಾಡಲು ಸಾಧ್ಯವೆಂಬ ಅಷ್ಟನ್ನು ನೋಟ್ ಬುಕ್‌ನಲ್ಲಿ ಬರೆಯುವಂತೆ ತಿಳಿಸುವುದು. ಅವಧಿಯ ನಂತರ ಒಬ್ಬೊಬ್ಬರಂತೆ ಓದಬೇಕು.



| | | | |
|---|---|---|---|
| ಉದಾ : ಕ : | ಕನಕ | ದ : | ದಳ |
| | ಕರಡಿ | | ದಳವಾಯಿ |
| | ಕಮಲ | | ದಾಳಿಂಬೆ |
| | ಕಮರ | | ದಾರ |
| | ಕಲಕು | | ಧೀರ ಇತ್ಯಾದಿ |

**2. ಪದಗಳ ರಚನೆ :** ಮೇಲಿನ ಚಟುವಟಿಕೆಯಲ್ಲಿ ತಯಾರಿಸಿರುವಂತೆ ನೂರಾರು ಅಕ್ಷರಗಳನ್ನು ವೆಡ್ಡಿಂಗ್ ಕಾರ್ಡಿನ ತುಂಡುಗಳ ಮೇಲೆ ಬರೆದು 5 ಜನರ ಗುಂಪುಗಳಲ್ಲಿ ತುಂಡುಗಳನ್ನು ಜೋಡಿಸಿ, ಪದಗಳನ್ನು ರಚಿಸಲು ಶಿಕ್ಷಕರು ವಿದ್ಯಾರ್ಥಿಗಳಿಗೆ ಸೂಚಿಸಬೇಕು.

ಉದಾ : 1. ಕ ನ ಕ  2. ಗ ರ ಗ ಸ  3. ಚ ಮ ಚ

**3. ಅಂತ್ಯಾಕ್ಷರಿ ಪದ ರಚನೆ :** ವಿದ್ಯಾರ್ಥಿಗಳನ್ನು ಎರಡು ಗುಂಪುಗಳನ್ನಾಗಿ ಶಿಕ್ಷಕರು ಮಾಡಬೇಕು. ಪ್ರತಿ ಗುಂಪಿಗೂ ನಾಯಕ/ಕಿಯನ್ನು ಆರಿಸಲು ಹೇಳುವುದು. ಟಾಸ್ ಹಾಕಬೇಕು. ಟಾಸ್ ಗೆದ್ದ ತಂಡ ಮೊದಲ ಪದವನ್ನು ಹೇಳಬೇಕು. ಪದದ ಅಂತ್ಯಾಕ್ಷರದಿಂದ ವಿರುದ್ಧ ತಂಡ ಪದವನ್ನು ಹೇಳಬೇಕು. ಪದದ ಅಂತ್ಯಾಕ್ಷರದಿಂದ ಮೊದಲ ತಂಡ ಬೇರೊಂದು ಪದವನ್ನು ಹೇಳಬೇಕು.

ನಿಯಮಗಳು :
1. ಪದವನ್ನು 10 ಸೆಕೆಂಡುಗಳ ಒಳಗೆ ಹೇಳಬೇಕು. ನಂತರ ಹೇಳಿದರೆ ಅಂಕ ಬರುವುದಿಲ್ಲ.
2. ಹೇಳಿದ ಪದವನ್ನು ಹೇಳಿದರೆ ಅಂಕ ಬರುವುದಿಲ್ಲ.
3. ಪ್ರತಿ ಪದಕ್ಕು ತಂಡಕ್ಕೆ ಒಂದು ಅಂಕ ಬರುತ್ತದೆ.

**4. ನೋಡಿ ವಾಕ್ಯ ರಚನೆ ಮಾಡುವುದು :**

ಲಭ್ಯವಿರುವ ಚಿತ್ರವೊಂದನ್ನು ತೂಗುಹಾಕಬೇಕು. ಚಿತ್ರ ದೊಡ್ಡದಾಗಿರಬೇಕು ಮತ್ತು ಹೆಚ್ಚು ವಿವರಗಳಿರಬೇಕು. ವಿದ್ಯಾರ್ಥಿಗಳು ಚಿತ್ರವನ್ನು ನೋಡಿ ವಿವರಗಳನ್ನು ವಾಕ್ಯಗಳಲ್ಲಿ ಬರೆಯುವಂತೆ ಹೇಳಬೇಕು. ಯಾರು ಹೆಚ್ಚು ವಾಕ್ಯಗಳನ್ನು ಬರೆಯುತ್ತಾರೋ ಅವರು ಗೆಲ್ಲುತ್ತಾರೆ.

# ಪಾಠ : ವಿದ್ಯುತ್ : (ಪ್ರದರ್ಶನ ಪಾಠ)

ಅಗತ್ಯ ಸಾಮಗ್ರಿಗಳು : ಮೇಣದ ಬತ್ತಿ ಟಾರ್ಚು, ವಿದ್ಯುತ್ ಬಲ್ಬ್, ಇಸ್ತ್ರಿಪೆಟ್ಟಿಗೆ, ಟ್ರಾನ್ಸಿಸ್ಟರ್, ಶುಷ್ಕಕೋಶ, ಮತ್ತಿತರ ವಿದ್ಯುತ್ ಉಪಕರಣಗಳು.

ವಿದ್ಯಾರ್ಥಿಗಳು ಅರ್ಧ ಚಂದ್ರಾಕಾರದಲ್ಲಿ ಕುಳಿತಿರಬೇಕು. ಮೂರ್‍ನಾಲ್ಕು ಜನರಿಗೊಂದರಂತೆ ಮೇಣದ ಬತ್ತಿಯನ್ನು ಅವರಿಗೆ ಒದಗಿಸಿರಬೇಕು. ವಿದ್ಯಾರ್ಥಿಗಳಿಗೆ ಅಭಿಮುಖವಾಗಿ ಶಿಕ್ಷಕರು ಕುಳಿತಿರಬೇಕು. ಅವರ ಮುಂದೆ, ಟಾರ್ಚು, ವಿದ್ಯುತ್ ಬಲ್ಬ್, ಇಸ್ತ್ರಿಪಟ್ಟಿಗೆ, ಶುಷ್ಕ ಕೋಶ ಇತ್ಯಾದಿ ಉಪಕರಣಗಳು ಇರಬೇಕು. ಶಿಕ್ಷಕರು ವಿದ್ಯಾರ್ಥಿಗಳಿಗೆ ಮೇಣದ ಬತ್ತಿಯನ್ನು ಹೊತ್ತಿಸಿ, ನೆಲಕ್ಕೆ ಅಂಟಿಸಲು ಹೇಳುವುದು. ಶಿಕ್ಷಕರು ವಿದ್ಯಾರ್ಥಿಗಳಿಗೆ ಪ್ರಶ್ನೆ ಕೇಳಿ ಉತ್ತರ ಪಡೆಯುವುದು.

ಪ್ರಶ್ನೆ : ಮೇಣದ ಬತ್ತಿ ಏನನ್ನು ನೀಡುತ್ತಿದೆ ?
ಉತ್ತರ : ಬೆಳಕು , ಶಾಖ ( ವಿದ್ಯಾರ್ಥಿಗಳಿಗೆ ಮೇಣದ ಬತ್ತಿಯನ್ನು ಆರಿಸಲು ಹೇಳುವುದು)
ಪ್ರಶ್ನೆ : ಬೆಳಕು ಇಲ್ಲದಿದ್ದರೆ ಏನು ತೊಂದರೆ ?
ಉತ್ತರ : ವಸ್ತುಗಳು ಕಾಣುವುದಿಲ್ಲ.
ಪ್ರಶ್ನೆ : ರಾತ್ರಿಹೊತ್ತು ಮನೆಯಲ್ಲಿ ಬೆಳಕನ್ನು ಯಾವುದರಿಂದ ಪಡೆಯುವಿರಿ ?
ಉತ್ತರ : ವಿದ್ಯುತ್ ದೀಪದಿಂದ, ಎಣ್ಣೆ ದೀಪದಿಂದ .
ಪ್ರಶ್ನೆ : ವಿದ್ಯುತ್ ದೀಪವು ಬೆಳಕನ್ನು ಕೊಡಲು ಯಾವ ಶಕ್ತಿಯನ್ನು ಒದಗಿಸಬೇಕು.?
ಉತ್ತರ : ವಿದ್ಯುತ್ ಶಕ್ತಿ.
ಪ್ರಶ್ನೆ : ವಿದ್ಯುತ್ ಶಕ್ತಿಯನ್ನು ಯಾವ ಯಾವ ಕೆಲಸಗಳಿಗೆ ಬಳಸುತ್ತಾರೆ ?
ಉತ್ತರ : ನೀರೆತ್ತಲು, ಫ್ಯಾನ್ ತಿರುಗಲು, ಯಂತ್ರ ಕೆಲಸ ಮಾಡಲು ಇತ್ಯಾದಿ.
ಪ್ರಶ್ನೆ : ನನ್ನ ಮುಂದಿರುವ ಯಾವ ಸಾಧನ ವಿದ್ಯುತ್‌ನ್ನು ಕೊಡುತ್ತದೆ ?
ಉತ್ತರ : ಸೆಲ್ (ವಿದ್ಯುತ್ಕೋಶ)
ಪ್ರಶ್ನೆ : ವಿದ್ಯುತ್ಕೋಶ (ಸೆಲ್) ಇಲ್ಲಿರುವ ಯಾವ ಉಪಕರಣಗಳನ್ನು ಕೆಲಸಮಾಡಿಸಬಹುದು ?
ಉತ್ತರ : ಟ್ರಾನ್ಸಿಸ್ಟರ್, ಟಾರ್ಚ್,

ಪ್ರಶ್ನೆ : ಇಸ್ತ್ರೀ ಪೆಟ್ಟಿಗೆ ಕೆಲಸಮಾಡಲು ಬೇಕಾದ ವಿದ್ಯುತ್ ಎಲ್ಲಿಂದ ಬರುತ್ತದೆ ?
ಉತ್ತರ : ಲಿಂಗನಮಕ್ಕಿಯಿಂದ (ಸ್ಥಳೀಯ ಕೇಂದ್ರ)
ಪ್ರಶ್ನೆ : ಲಿಂಗನಮಕ್ಕಿಯಲ್ಲಿ ವಿದ್ಯುತ್‌ನ್ನು ಯಾವುದರಿಂದ ಉತ್ಪತ್ತಿಮಾಡುತ್ತಾರೆ ?
ಉತ್ತರ : ನೀರಿನಿಂದ ವಿದ್ಯುತ್‌ನ್ನು ಉತ್ಪತ್ತಿಮಾಡುವರು.

ಶಿಕ್ಷಕರು ವಿದ್ಯುತ್‌ನ್ನು ಉತ್ಪಾದಿಸುವ ಇತರ ವಿಧಾನಗಳನ್ನು ಮತ್ತು ವಿದ್ಯುತ್ ಶಕ್ತಿ ಅಪವ್ಯಯ ತಡೆಯುವ ವಿಧಾನಗಳನ್ನು ತಿಳಿಸಿ ಪಾಠವನ್ನು ಮುಗಿಸುವುದು.

## ಪಾತ್ರ : ಆಲದ ಮರ (ಪಾತ್ರಾಭಿನಯ)

ಆಲದ ಮರ, ಪ್ರಾಣಿಗಳು ಮತ್ತು ಮರ-ಕಡಿಯುವವನ ಪಾತ್ರವನ್ನು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ನಿರ್ವಹಿಸಬೇಕು. ಮೂವರು ವಿದ್ಯಾರ್ಥಿಗಳು ಬೇರೆ ಬೇರೆ ದಿಕ್ಕುಗಳಲ್ಲಿ ಕೈಗಳನ್ನು ಚಾಚಿಕೊಂಡು ನಿಂತು ಆಲದ ಮರವನ್ನು ನಿರ್ಮಿಸುವುದು.



ಮರದ ಉಪಯೋಗಗಳು ಪ್ರೇಕ್ಷಕರಿಗೆ ಮನವರಿಕೆ ಮಾಡಿಕೊಡಲು ಕೆಲ ವಿದ್ಯಾರ್ಥಿಗಳು ಅಭಿನಯಿಸಿ ತೋರಿಸಬೇಕು. ಉದಾ: ಮಕ್ಕಳ ಆಟ, ಪ್ರಾಣಿ ಹಾಗೆ ಸೊಪ್ಪು ತಿನ್ನುವುದು, ಮನುಷ್ಯ ಮಲಗಿರುವುದು, ಸೌದೆ ಆಯುವುದು ಇತ್ಯಾದಿ.

ಕಾಗೆ : (ಜೋರಾಗಿ) ಬಂಧುಗಳೇ ಗಮನವಿಟ್ಟು ಕೇಳಿರಿ, ಈ ಆಲದ ಮರದ ಮೇಲೆ ನಾನು ಬಹಳ ವರ್ಷಗಳಿಂದ ವಾಸವಾಗಿದ್ದೇನೆ. ಆದ್ದರಿಂದ ಇದರ ಮೇಲೆ ನನ್ನ ಹಕ್ಕಿದೆ.

ಹಾವು : (ಹೆಡೆಎತ್ತಿ ) ನಾನು ಈ ಹುತ್ತದಲ್ಲಿ ಮೂರು ತಲೆಮಾರಿನಿಂದ ವಾಸವಾಗಿದ್ದೇನೆ. ಆದ್ದರಿಂದ ಈ ಮರ ನನ್ನದೇ.

ಅಳಿಲು : (ನೆಗೆಯುತ್ತಾ ಬಂದಂತೆ ಅಭಿನಯಿಸಿ) ಕೇಳಿರಿ, ನಾನು ನನ್ನ ಮಕ್ಕಳೊಡನೆ ಎಷ್ಟೋ ವರ್ಷಗಳಿಂದ ವಾಸವಾಗಿದ್ದೇನೆ. ಈ ಮರ ನನ್ನದು.

ಗಿಳಿ : (ಹಾರಿ ಬಂದಂತೆ ನಟಿಸಿ) ಅನಾದಿಕಾಲದಿಂದಲೂ ಇದರ ಹಣ್ಣುಗಳನ್ನು ತಿನ್ನುತ್ತಾ ಬಂದವನು ನಾನು. ಈ ಮರವನ್ನು ನಾನೆಂದಿಗೂ ಬಿಟ್ಟುಕೊಡಲಾರೆ.

ಎಲ್ಲಾ ಪ್ರಾಣಿಗಳು : (ಒಟ್ಟಾಗಿ) ಈ ಆಲದ ಮರ ನನಗೆ ಸೇರಿದ್ದು.
ಈ ಆಲದ ಮರ ನನಗೆ ಸೇರಿದ್ದು.
ಅಷ್ಟರಲ್ಲಿ
ಆಡು ನಡೆದುಕೊಂಡು ಬರುವುದು
ಆಡು (ನಡೆದುಕೊಂಡು ಬಂದಂತೆ ನಟಿಸುವುದು)

ಎಲ್ಲಾ ಪ್ರಾಣಿಗಳು : (ಒಟ್ಟಾಗಿ) ಮಿತ್ರನೇ ನಮ್ಮ ನ್ಯಾಯ ತೀರ್ಮಾನ ಮಾಡು.
(ಒಬ್ಬೊಬ್ಬರಾಗಿ) ಈ ಮರ ಯಾರಿಗೆ ಸೇರಬೇಕು ?

ಆಡು : ಬಂಧುಗಳೇ, ನಿಮ್ಮೆಲ್ಲರ ಸಮಸ್ಯೆ ನನಗೆ ಅರ್ಥವಾಯಿತು. ಇರಲಿ ನೀವೇನು ಬೇಸರ ಪಡಬೇಡಿ. ಈ ಊರಿನಲ್ಲಿ ಒಬ್ಬ ಮರಕಡಿಯುವವನಿದ್ದಾನೆ . ಆತನನ್ನು ಬರಹೇಳಿ . ಈ ಮರವನ್ನು ಅವನು ನಿಮಗೆ ಪಾಲು ಮಾಡಿಕೊಡುತ್ತಾನೆ. ಮೇಲಿನ ಭಾಗ ಕಾಗೆಗೆ, ಟೊಂಗೆಯು ಅಳಿಲಿಗೆ , ಹಣ್ಣುಗಳು ಗಿಳಿಗೆ , ಬುಡವು ಹಾವಿಗೆ , ಹೀಗೆ - ಇಷ್ಟೆಲ್ಲಾ ಸಲಹೆ ನೀಡಿದ ನನಗೇನಾದರೂ ಬೇಡವೇ ? ಹಸಿ ಹಸಿ ಎಲೆಗಳು ನನಗಿರಲಿ.

( ಕಾಗೆಹಾರುತ್ತಾ ಹೋಗಿ ದೂರದಲ್ಲಿ ಕುಳಿತಿರುವ ವ್ಯಕ್ತಿಯನ್ನು ಕರೆತರುವಂತೆ ಅಭಿನಯಿಸುವುದು.)

ಕಾಗೆ : ಈ ಮರದಲ್ಲಿ ನಾವೆಲ್ಲಾ ವಾಸವಾಗಿದ್ದೇವೆ. ಎಲ್ಲರೂ, ಈ ಮರ ನನ್ನದು ಎನ್ನುತ್ತಿದ್ದಾರೆ. ಆದ್ದರಿಂದ ಈ ಮರವನ್ನು ಕಡಿದು ಪಾಲು ಮಾಡಿಕೊಡು.

ಮಾನವ : ಕಾಗೆಯೇ, ಹಲವು ವರ್ಷಗಳಿಂದ ನಾನು ಮರಕಡಿಯುವುದನ್ನು ಬಿಟ್ಟಿದ್ದೇನೆ. ನಮಗೆ ಹಸಿರನ್ನು ಉಸಿರನ್ನು ಕೊಡುವ ಮರವನ್ನು ಕಡಿಯುವುದು ಮಹಾ ಪಾಪ ಎಂದು ಕೊಂಡಿದ್ದೇನೆ.

ಎಲ್ಲರು : ಮಾನವ ಮಿತ್ರನೇ, ನಮ್ಮ ಪಾಲನ್ನು ನಮಗೆ ಕೊಡು.
ನಮ್ಮ ಪಾಲನ್ನು ನಮಗೆ ಕೊಟ್ಟು ಬಿಡು.

ಮಾನವ : ನಿಮಗೆ, ನಾನು ಕೆಲವು ವಿಚಾರಗಳನ್ನು ತಿಳಿಸಬಯಸುತ್ತೇನೆ. ನೀವು ಪರಸ್ಪರ ಅರಿಯದೆ ಜಗಳ ಮಾಡಿಕೊಳ್ಳುತ್ತಿದ್ದೀರಿ. ನೀವೆಲ್ಲಾ ನಿಮ್ಮ ಹಕ್ಕಿನ ಬಗ್ಗೆ ಏನಾದರೂ ಆಲೋಚನೆ ಮಾಡಿರುವಿರೇನು? ಈ ಮರದಿಂದ ನೀವು ಬಹಳ ಉಪಕಾರ ಹೊಂದಿದ್ದೀರಿ. ಪ್ರತ್ಯುಪಕಾರ ನೀವೇನು ಮಾಡಿದ್ದೀರಿ ಹೇಳಿ. ನಿಮ್ಮಲ್ಲಿ ಯಾರಾದರೂ ಅದಕ್ಕೆ ನೀರುಣಿಸಿದ್ದೀರಾ ? ಇಲ್ಲ. ಮಳೆಗಾಲ ಕಾಲಕಾಲಕ್ಕೆ ಮಳೆ ಸುರಿಸಿ ನೀರುಣಿಸುತ್ತಾನೆ. ನೀವೇನಾದರೂ ಬೆಳಕು ಕೊಟ್ಟಿರುವಿರೇನು ? ಇಲ್ಲ. ಸೂರ್ಯ ಬೆಳಕು ನೀಡುತ್ತಾನೆ. ಅದರ ದೇಹಕ್ಕೇನಾದರೂ ಆಧಾರವಾಗಿದ್ದೀರಾ ? ಇಲ್ಲ. ಈ ಭೂಮಿತಾಯಿ ಅದರ ಬೇರುಗಳನ್ನು ತನ್ನ ಹೃದಯದಲ್ಲಿ ಬಿಗಿ ಹಿಡಿದು ರಕ್ಷಿಸುತ್ತಿದ್ದಾಳೆ. ಮಳೆರಾಯ, ಸೂರ್ಯದೇವ, ಭೂಮಿತಾಯಿ ಇವರೆಲ್ಲಾ ತಮ್ಮ ತಮ್ಮ ಕರ್ತವ್ಯಗಳನ್ನು ತಪ್ಪದೆ ಮಾಡುತ್ತಾ ಬಂದಿದ್ದಾರೆ. ಎಂದೂ ತಮ್ಮ ಹಕ್ಕು ಸಾಧಿಸಲು ಜಗಳವಾಡಿಲ್ಲ. ನೀವೆಲ್ಲಾ ನಿಮ್ಮ ನಿಮ್ಮ ಕರ್ತವ್ಯಗಳಲ್ಲಿ ತಪ್ಪಿದ್ದೀರಿ. ಸ್ವಾರ್ಥಿಗಳಾಗಿದ್ದೀರಿ. ಸ್ವಲ್ಪ ವಿಚಾರ ಮಾಡಿ ಭಿನ್ನಾಭಿಪ್ರಾಯಗಳನ್ನು ಮರೆತು ಒಗ್ಗಟ್ಟಿನಿಂದ ಬಾಳಿ. ನಿಮಗೆ ಸಿಗುವ ಸುಖವನ್ನು ಎಂದಿಗೂ ಕಳೆದುಕೊಳ್ಳಬೇಡಿ.

ಕಾಗೆ : ಹೌದಲ್ಲವೇ ? ನಾವೆಲ್ಲಾ ಹಕ್ಕು ಸ್ಥಾಪಿಸಲು ಹೋಗಿ ನಮ್ಮ ನೆಲೆಯನ್ನೇ ಕಳೆದುಕೊಳ್ಳುತ್ತಿದ್ದೆವಲ್ಲ.

ಅಳಿಲು : ನನ್ನ ಕರ್ತವ್ಯಗಳನ್ನು ಮರೆತು ಹಕ್ಕಿಗಾಗಿ ಹೋರಾಡುತ್ತಿದ್ದೇವಲ್ಲ.

ಗಿಳಿ : ಈ ಮರ ಸೃಷ್ಟಿಯ ಕೊಡುಗೆ. ನಾವು ಒಟ್ಟಾಗಿ ಬಾಳಬೇಕು.

ಎಲ್ಲರು : ಈ ಮರ ಸೃಷ್ಟಿಯ ಕೊಡುಗೆ ನಾವು ಒಟ್ಟಾಗಿ ಬಾಳಬೇಕು.
ನಾವು ಒಟ್ಟಾಗಿ ಬಾಳಬೇಕು.

ಾನವ: ಹೌದು ನಾನು - ನೀವು ಒಟ್ಟಾಗಿ ಬದುಕಬೇಕು. ಎಲ್ಲರೂ, ಎಲ್ಲವನ್ನು ಹಂಚಿಕೊಂಡು ಹೊಂದಿಕೊಂಡು ಬದುಕಬೇಕು. ಎಲ್ಲರೂ ಹೊಂದಿಕೊಂಡು ಬದುಕಬೇಕು.

ಪಾತ್ರಾಭಿನಯದ ನಂತರ ಸರಳ ಮಾತುಗಳಲ್ಲಿ ಸಾರಾಂಶವನ್ನು ವಿವರಿಸುವುದು ುತ್ತು ಕವಿ- ಕಾವ್ಯ ವಿಚಾರವನ್ನು ತಿಳಿಸುವುದು.

## ಪದ್ಯ : ನಮ್ಮೂರು ನಮಗೆ ಸವಿಬೆಲ್ಲ ( ರೂಪಕ )

ತರಗತಿಯ ಮಕ್ಕಳನ್ನು ಎರಡು ಗುಂಪುಗಳನ್ನಾಗಿ ಶಿಕ್ಷಕರು ಗುಂಪುಮಾಡಿ ಎರಡು ೇರ ಸಾಲುಗಳಲ್ಲಿ ಎದುರು ಬದುರಾಗಿ ನಿಲ್ಲಿಸುವುದು. ಪದ್ಯದ ಒಂದೊಂದು ಾಲುಗಳನ್ನು ಹೇಳಿಕೊಡುವುದು.

ಮೊದಲನೆ ಸಾಲಿನವರಿಗೆ ಪದ್ಯದ 1, 3, 5, 7........ನೇ ಸಾಲುಗಳನ್ನು ೇಳಿಕೊಡಬೇಕು.

ಎರಡನೆಯ ಸಾಲಿನವರಿಗೆ ಪದ್ಯದ 2, 4, 6, 8.........ನೇ ಸಾಲಿನ ಪದಗಳನ್ನು ೆರಡೆರಡು ಬಾರಿ ಹೇಳಿಕೊಡುವುದು. ಪದ್ಯದ ಸಾಲುಗಳನ್ನು ಮುರ್‍ನಾಲ್ಕು ಬಾರಿ ೇಳಿಕೊಡುವುದು. ನಂತರ ಮೊದಲನೆಯ ಮತ್ತು ಎರಡನೆಯ ಸಾಲಿನ ವಿದ್ಯಾರ್ಥಿಗಳು ಪದ್ಯದಲ್ಲಿರುವಂತೆ ಸಾಲುಗಳನ್ನು ಒಬ್ಬರ ನಂತರ ಮತ್ತೊಬ್ಬರು ಪರ್ಯಾಯವಾಗಿ ೇಳುವಂತೆ ಶಿಕ್ಷಕರು ಸೂಚಿಸಬೇಕು. ಪದ್ಯವನ್ನು ಎರಡು ಸಾಲಿನವರು ಕ್ರಮವಾಗಿ ೇಳುವುದು ಖಚಿತಪಡಿಸಿಕೊಂಡಮೇಲೆ, ಶಿಕ್ಷಕರು ಪ್ರತಿ ಸಾಲಿಗೂ ವಿದ್ಯಾರ್ಥಿಗಳು ಹೇಗೆ ಭಿನಯಿಸಬೇಕೆಂದು, ತಾವೇ ಅಭಿನಯಿಸಿತೋರಿಸಬೇಕು. ಅನಂತರ ವಿದ್ಯಾರ್ಥಿಗಳು ಾಡುತ್ತಾ ಎರಡು/ಮೂರು ಬಾರಿ ಅಭಿನಯಿಸುವಂತೆ ಹೇಳಿ, ನಂತರ - ಳಿತುಕೊಳ್ಳುವಂತೆ ಸೂಚಿಸುವುದು.

ಪದ್ಯದ ಸಾರಾಂಶವು ಮಕ್ಕಳಿಗೆ ಮನವರಿಕೆಯಾಗಿರುವುದನ್ನು ಪ್ರಶ್ನೆಕೇಳಿ ಉತ್ತರವನ್ನು ಪಡೆದು ಶಿಕ್ಷಕರು ಖಚಿತಪಡಿಸಿಕೊಳ್ಳಬೇಕು. ಮಕ್ಕಳಿಗೆ ಪೂರ್ಣವಾಗಿ ಮನವರಿಕೆಯಾಗಲು ಕಠಿಣ ಪದಗಳ ಅರ್ಥವನ್ನು ಹೇಳಿ ಸರಳ ಮಾತುಗಳಲ್ಲಿ ವಿವರಿಸಬೇಕು.

***ಸೂಚನೆ :*** ಕನ್ನಡ ಭಾಷಾ ವಿಭಾಗದಲ್ಲಿ ವಿವರಿಸಲಾಗಿರುವ ವಿಧಾನಗಳಲ್ಲಿ ಇನ್ನಿತರ ಪಾಠಗಳು ಮತ್ತು ಪದ್ಯಗಳನ್ನು ಶಿಕ್ಷಕರು ಬೋಧಿಸಲು ಪ್ರಯತ್ನಿಸುವುದು.



# ಮಾಡಿ ನೋಡು

## ( ಭೌತ ವಿಜ್ಞಾನ )

ಸರಳ ಪ್ರಯೋಗಳನ್ನು ಮಕ್ಕಳು ಮಾಡಿ ತೀರ್ಮಾನಗಳನ್ನು ಅವರೇ ತೆಗೆದುಕೊಳ್ಳುವ ಅವಕಾಶವನ್ನು ಈ ವಿಭಾಗದಲ್ಲಿ ಮಾಡಿಕೊಡಲಾಗಿದೆ.

**ಬೋಧನಾ ವಿಷಯಗಳು :** ಪದಾರ್ಥಗಳು ಮತ್ತು ಅವುಗಳ ಗುಣಗಳು.

ಎ. ಪದಾರ್ಥಗಳ ಗುಣಗಳು, ಬಿ. ದ್ರವ್ಯದ ಅರ್ಥ, ಸಿ. ದ್ರವ್ಯದ ಸ್ಥಿತಿಗಳು

**ಎ. ಪದಾರ್ಥಗಳು ಗುಣಗಳು :**

**ಅಗತ್ಯ ಸಾಮಗ್ರಿಗಳು** : ಪುಸ್ತಕ, ಪೆನ್ನು ರಬ್ಬರ್, ಹತ್ತಿ ಉಂಡೆ, ಬಟ್ಟೆ, ಕಾಗದದ ಉಂಡೆ, ಸೀಸೆ, ಮೇಣದ ಬತ್ತಿ, ಕಲ್ಲು, ಬೀಜಗಳು, ಪ್ಲಾಸ್ಟಿಕ್ ಚೀಲ, ಸೀಮೆ ಸುಣ್ಣ, ಮಣ್ಣಿನ ಉಂಡೆ, ಗಾಳಿ ತುಂಬಿದ ಬಲೂನ್ ಖಾಲಿ ಗಾಜಿನ ಲೋಟ. (ಲಭ್ಯವಿರುವ ಇತರ ವಸ್ತುಗಳು) ಪೀನ ಮಸೂರ

**ಒಳಾಂಗಣ ಚಟುವಟಿಕೆಗಳು :** ತರಗತಿಯ ವಿದ್ಯಾರ್ಥಿಗಳನ್ನು ಶಿಕ್ಷಕರು 4-5 ಜನರ ಗುಂಪುಗಳನ್ನಾಗಿ ಮಾಡಿ, ಮೇಲಿನ ವಸ್ತುಗಳನ್ನು ತಮ್ಮ ಮುಂದೆ ಅರ್ಧ ಚಂದ್ರಾಕಾರದಲ್ಲಿ ಕುಳಿತುಕೊಂಡು ಇಟ್ಟುಕೊಳ್ಳುವಂತೆ ಸೂಚನೆ ನೀಡುವುದು.

**ಚಟುವಟಿಕೆ 1** : ಪ್ರತಿ ಗುಂಪಿನ ವಿದ್ಯಾರ್ಥಿಯು ತಮ್ಮ ಮುಂದಿರುವ ಪ್ರತಿ ವಸ್ತುವನ್ನು ಕೈಯಲ್ಲಿ ಬಿಗಿಯಾಗಿ ಹಿಡಿದು ಕೆಳಗಿಡುವಂತೆ ಶಿಕ್ಷಕರು ತಿಳಿಸಬೇಕು. ವಿದ್ಯಾರ್ಥಿಗಳು ಹಾಗೆ ಮಾಡಿದ ನಂತರ, ಶಿಕ್ಷಕರು ವಿದ್ಯಾರ್ಥಿಗಳನ್ನು ಪ್ರಶ್ನಿಸುವರು.

ಪ್ರಶ್ನೆ : ಹಿಡಿದಾಗ ನಿಮಗೇನು ಅನುಭವವಾಗುತ್ತದೆ?

ಉತ್ತರ : ಕೆಲವು ಗಡುಸಾಗಿವೆ. ಕೆಲವು ಮೃದುವಾಗಿವೆ. ವಿದ್ಯಾರ್ಥಿಯು ಗಾಜಿನ ಸೀಸೆ, ಕಲ್ಲು, ಪ್ಲಾಸ್ಟಿಕ್ ಚೀಲ, ಪುಸ್ತಕವನ್ನು ತನ್ನ ಕೈ ಮೇಲೆ ಲಘುವಾಗಿ ಉಜ್ಜುವಂತೆ ಶಿಕ್ಷಕರು ಸೂಚನೆ ನೀಡುವುದು, ವಿದ್ಯಾರ್ಥಿಗಳು ಹಾಗೆ

ಮಾಡಿದ ನಂತರ, ಪ್ರಶ್ನಿಸುವುದು.

ಪ್ರಶ್ನೆ : ಪದಾರ್ಥಗಳನ್ನು ಕೈಮೇಲೆ ಉಜ್ಜಿಕೊಂಡಾಗ ಅವುಗಳ ಮೇಲ್ಮೈ ಹೇಗಿದೆ ಎಂದು ತಿಳಿಯಿತೆ ?

ಉತ್ತರ : ಪದಾರ್ಥಗಳಲ್ಲಿ ಕೆಲವು ನಯವಾಗಿವೆ. ಕೆಲವು ಒರಟಾಗಿವೆ.

**ಚಟುವಟಿಕೆ 2** : ಕಲ್ಲು, ಸೀಮೆ ಸುಣ್ಣ , ತಂತಿ, ಮಣ್ಣಿನ ಉಂಡೆಯನ್ನು ಪ್ರತಿಗುಂಪಿನವರು ಮೇಲೆತ್ತಿ ಹಿಡಿದು ಕೆಳಗೆ ಬಿಡಲು ಶಿಕ್ಷಕರು, ವಿದ್ಯಾರ್ಥಿಗಳಿಗೆ ತಿಳಿಸಿ, ನಂತರ ಪ್ರಶ್ನಿಸುವುದು.

ಪ್ರಶ್ನೆ : ಪದಾರ್ಥಗಳನ್ನು ಮೇಲಿಂದ ಎತ್ತಿ ಹಾಕಿದಾಗ ಏನಾಗುತ್ತವೆ ?

ಉತ್ತರ : ಕೆಲವು ಒಡೆಯುತ್ತವೆ, ಕೆಲವು ಒಡೆಯುವುದಿಲ್ಲ.

**ಚಟುವಟಿಕೆ 3** : ಪ್ರತಿ ಗುಂಪಿನವರು ಮೇಣದ ಬತ್ತಿಯನ್ನು ಹೊತ್ತಿಸಿ, ನೆಲಕ್ಕೆ ಅಂಟಿಸಲು ಶಿಕ್ಷಕರು ತಿಳಿಸಬೇಕು. ಮತ್ತು ಸ್ವಲ್ಪ ದೂರದಲ್ಲಿ ಪುಸ್ತಕವನ್ನು ನಿಲ್ಲಿಸುವಂತೆ ಸೂಚಿಸಬೇಕು. ( ಪುಸ್ತಕದ ತೆರೆ ) ಮೇಣದ ಬತ್ತಿ ಮತ್ತು ಪುಸ್ತಕದ ನಡುವೆ ಪೆನ್ಸಿಲ್, ಗಾಜಿನ ಪಟ್ಟಿ, ರಬ್ಬರ್, ಬಣ್ಣವಿಲ್ಲದ ಪ್ಲಾಸ್ಟಿಕ್ ಹಾಳೆಗಳನ್ನು ಹಿಡಿಯಲು ತಿಳಿಸುವುದು. ನಂತರ ಶಿಕ್ಷಕರು ಪ್ರಶ್ನಿಸುವುದು.

ಪ್ರಶ್ನೆ : ಪೆನ್ಸಿಲ್, ರಬ್ಬರ್, ತಂತಿಗಳನ್ನು ಹಿಡಿದಾಗ ಪುಸ್ತಕದ ಮೇಲೆ ಏನು ಬಿದ್ದಿತು?

ಉತ್ತರ : ನೆರಳು

ಪ್ರಶ್ನೆ : ನೆರಳು ಏಕೆ ಉಂಟಾಗುತ್ತದೆ ?

ಉತ್ತರ : ಬೆಳಕನ್ನು ವಸ್ತುಗಳು ತಡೆಯುತ್ತವೆ.

ಪ್ರಶ್ನೆ : ಗಾಜಿನ ಪಟ್ಟಿ, ಬಣ್ಣವಿಲ್ಲದ ಪ್ಲಾಸ್ಟಿಕ್ ಹಾಳೆಯನ್ನು ಹಿಡಿದಾಗ ನೆರಳು ಉಂಟಾಗುವುದಿಲ್ಲ ಏಕೆ ?

ಉತ್ತರ : ಅವು ಬೆಳಕನ್ನು ತಡೆಯುವುದಿಲ್ಲ.

ಪಾರದರ್ಶಕ ಮತ್ತು ಅಪಾರದರ್ಶಕಗಳ ಅರ್ಥವನ್ನು ಶಿಕ್ಷಕರು ವಿವರಿಸಬೇಕು.

**ಚಟುವಟಿಕೆ 4** : ಸೀಮೆ ಸುಣ್ಣ, ಮಣ್ಣಿನ ಉಂಡೆಗಳನ್ನು ಪುಡಿಮಾಡಿ, ಪ್ರತಿ ಗುಂಪಿನವರು ಮಸೂರದ ಮೂಲಕ ಪುಡಿಯನ್ನು ನೋಡಲು ಶಿಕ್ಷಕರು ಸೂಚಿಸಿ,

ೀಕ್ಷಣೆಯ ನಂತರ ಪ್ರಶ್ನಿಸುವುದು.

ಶ್ನೆ : ಪದಾರ್ಥಗಳಲ್ಲಿ ಏನಿದೆ ?

ತ್ತರ : ಪದಾರ್ಥಗಳಲ್ಲಿ ಸಣ್ಣ ಕಣಗಳಿವೆ. ಎಲ್ಲಾ ಪದಾರ್ಥಗಳಲ್ಲಿಯೂ ಕಣಗಳಿವೆ ಎಂದು ಶಿಕ್ಷಕರು ತಿಳಿಸಬೇಕು.

## . ದ್ರವ್ಯದ ಅರ್ಥ :

ಗತ್ಯ ಸಾಮಗ್ರಿಗಳು : ಪುಸ್ತಕಗಳು. ಲೋಟದಲ್ಲಿ ನೀರು, ಗಾಜಿನ ಲೋಟದಲ್ಲಿ ಹಾಲು, ಕಾಗದ ಉಂಡೆ, ಖಾಲಿ ಲೋಟ, ನೀರು ತುಂಬಿದ ಬಕೆಟ್.

ತರಗತಿಯ ವಿದ್ಯಾರ್ಥಿಗಳನ್ನು 4-5 ಜನರ ಗುಂಪುಗಳನ್ನಾಗಿ ಶಿಕ್ಷಕರು ವಿಂಗಡಿಸಿ ಳಗಿನ ಚಟುವಟಿಕೆಗಳಲ್ಲಿ ತೊಡಗಿಸುವುದು. ಪ್ರತಿ ಗುಂಪಿನವರು ರ್ಧಚಂದ್ರಾಕಾರವಾಗಿ ಕುಳಿತಿರಲಿ.

**ಟುವಟಿಕೆ 1** : ಪುಸ್ತಕವೊಂದನ್ನು ಪ್ರತಿ ಗುಂಪಿನವರು ನೆಲದ ಮೇಲಿಡಲು ಶಿಕ್ಷಕರು ೂಚಿಸುವುದು. ಪುಸ್ತಕವನ್ನು ಪ್ರತಿ ಗುಂಪಿನವರು ನೆಲದ ಮೇಲಿಟ್ಟ ಮೇಲೆ, ಅದೇ ಾಗದಲ್ಲಿ ಬೇರೆ ಪುಸ್ತಕವನ್ನು , ಮೊದಲಿನ ಪುಸ್ತಕವನ್ನು ಜರುಗಿಸದೆ ಇಡಲು ಶಿಕ್ಷಕರು ಳಿಸಬೇಕು.

**ಚಟುವಟಿಕೆ 2** : ಒಂದು ಗಾಜಿನ ಲೋಟದಲ್ಲಿ ನೀರನ್ನು ತುಂಬಲು ಪ್ರತಿ ುಂಪಿನವರಿಗೂ ಶಿಕ್ಷಕರು ತಿಳಿಸಿ, ವಿದ್ಯಾರ್ಥಿಗಳು ಲೋಟದಲ್ಲಿ ನೀರನ್ನು ತುಂಬಿದ ಮೇಲೆ, ಅದೇ ಲೋಟದಲ್ಲಿ ನೀರನ್ನು ಸುರಿಯದೆ ಹಾಲು ತುಂಬಲು ಸೂಚಿಸಬೇಕು. ಆ ನಂತರ ಪ್ರಶ್ನೆ ಹಾಕಿ ಶಿಕ್ಷಕರು ಉತ್ತರ ಪಡೆಯಬೇಕು.

ಪ್ರಶ್ನೆ : ಒಂದು ಪುಸ್ತಕದಲ್ಲಿ ಇರುವ ಜಾಗದಲ್ಲಿ ಮತ್ತೊಂದು ಪುಸ್ತಕವನ್ನು ಇಡಲಾಯಿತೆ ?

ಉತ್ತರ : ಇಲ್ಲ.

ಪ್ರಶ್ನೆ : ಏಕೆ ?

ಉತ್ತರ : -----

ಪ್ರಶ್ನೆ : ನೀರು ತುಂಬಿದ ಲೋಟದಲ್ಲಿ, ನೀರನ್ನು ಸುರಿಯದೆ ಹಾಲು ತುಂಬಲು ಸಾಧ್ಯವಾಯಿತೆ ?

ಉತ್ತರ : ಇಲ್ಲ

ಪ್ರಶ್ನೆ : ಏಕೆ ?

ಉತ್ತರ : -----

**ಚಟುವಟಿಕೆ** : ಒಂದು ಗಾಜಿನ ಲೋಟದಲ್ಲಿ ಕಾಗದ ಉಂಡೆಯನ್ನು ತುರುಕಲು ಪ್ರತಿ ಗುಂಪಿನವರಿಗೂ ಶಿಕ್ಷಕರು ತಿಳಿಸಬೇಕು. (ಲೋಟವನ್ನು ತಲೆಕೆಳಗು ಮಾಡಿದರೂ ಕಾಗದ ಉಂಡೆ ಕೆಳಗೆ ಬೀಳಬಾರದು) ಲೋಟವನ್ನು ತಲೆಕೆಳಗು ಮಾಡಿ, ನೀರು ತುಂಬಿದ ಬಕೆಟ್‌ನಲ್ಲಿ ಸಂಪೂರ್ಣವಾಗಿ ಮುಳುಗಿಸಲು ಹೇಳಿ, ಹಾಗೆ ಮಾಡಿದ ನಂತರ ಶಿಕ್ಷಕರು ಪ್ರಶ್ನಿಸುವುದು.

ಪ್ರಶ್ನೆ : ಲೋಟದಲ್ಲಿರುವ ಕಾಗದ ತೇವ ( ಒದ್ದೆ ) ವಾಗಿದೆಯೇ ?

ಉತ್ತರ : ಇಲ್ಲ

ಪ್ರಶ್ನೆ : ಏಕೆ ?

ಉತ್ತರ : ಲೋಟಕ್ಕೆ ನೀರು ಹೋಗಿಲ್ಲ ( ಹರಿದಿಲ್ಲ )

ಪ್ರಶ್ನೆ : ಲೋಟ ಖಾಲಿಯಿದ್ದರೂ ನೀರು ಲೋಟಕ್ಕೆ ಏಕೆ ಹೋಗಿಲ್ಲ ? ( ಕಾಗದದ ಉಂಡೆಯಿರುವ ಜಾಗವನ್ನು ಬಿಟ್ಟು )

ಉತ್ತರ : ಲೋಟ ಖಾಲಿಯಿಲ್ಲ.

ಪ್ರಶ್ನೆ : ಲೋಟದಲ್ಲಿ ಏನಿದೆ ?

ಉತ್ತರ : ಗಾಳಿಯಿದೆ.

ಪ್ರಶ್ನೆ : ಈಗ ಹೇಳಿ ನೀರು ಲೋಟಕ್ಕೆ ಏಕೆ ಹರಿದಿಲ್ಲ ?

ಉತ್ತರ : ಲೋಟದಲ್ಲಿ ಗಾಳಿ ಇರುವುದರಿಂದ ನೀರು ಹರಿದಿಲ್ಲ .

ಪ್ರಶ್ನೆ : ಮೇಲಿನ 3 ಚಟುವಟಿಕೆಗಳಿಂದ ನಿಮಗೇನು ತಿಳಿಯಿತು?

ಉತ್ತರ : -------

ಒಂದು ಸ್ಥಳವನ್ನು ಏಕಕಾಲದಲ್ಲಿ ಎರಡು ವಸ್ತುಗಳನ್ನು ಆಕ್ರಮಿಸಿಕೊಳ್ಳಲು ಸಾಧ್ಯವಿಲ್ಲ ಮತ್ತು ಪ್ರತಿಯೊಂದು ವಸ್ತುವಿಗೂ ಸ್ಥಳಬೇಕು. ಎಂದು ಶಿಕ್ಷಕರು ತೀರ್ಮಾನ ಹೇಳುವುದು ಮತ್ತು ಕೆಳಗಿನ ಚಟುವಟಿಕೆಗಳನ್ನು ಮಾಡಿಸುವುದು.

**ಚಟುವಟಿಕೆ 1** : ಪ್ರತಿ ತಂಡದ ಪ್ರತಿಯೊಬ್ಬರು ಒಂದೇ ಕೈಯ ಮೇಲೆ ಅಂಗೈ ಮೇಲೆ 3 ಪುಸ್ತಕಗಳನ್ನು ಒಂದರ ಮೇಲೊಂದರಂತೆ ಇಟ್ಟುಕೊಳ್ಳಲು ಶಿಕ್ಷಕರು, ಸೂಚಿಸಬೇಕು.

ಪುಸ್ತಕಗಳನ್ನು ಕೆಳಗಿಳಿಸಲು ಹೇಳಿ ಬೇರೊಂದು ಚಟುವಟಿಕೆಯಲ್ಲಿ ತೊಡಗಿಸಬೇಕು.

**ಚಟುವಟಿಕೆ 2** : ಎರಡು/ಮೂರು ಬೆರಳುಗಳಿಂದ ಕಲ್ಲು /ನೀರು ತುಂಬಿದ ಲೋಟವನ್ನು ಎತ್ತಲು ಪ್ರತಿ ವಿಧ್ಯಾರ್ಥಿಗೂ ಶಿಕ್ಷಕರು ತಿಳಿಸಬೇಕು. ಹಾಗೆ ಮಾಡಿದ ನಂತರ ಕಲ್ಲು / ಲೋಟವನ್ನು ಕೆಳಗಿಡಲು ಹೇಳಿ ಪ್ರಶ್ನಿಸಬೇಕು.

ಪ್ರಶ್ನೆ : ಅಂಗೈ ಮೇಲೆ ಪುಸ್ತಕಗಳನ್ನು ಇಟ್ಟುಕೊಂಡಿದ್ದಾಗ ಏನು ಅನುಭವವಾಯಿತು?

ಉತ್ತರ : ಕೈಯನ್ನು ಕೆಳಗೆ ತಳ್ಳಿದಂತಾಯಿತು. ( ಇದೇ ರೀತಿಯ ಬೇರೆ ಉತ್ತರ)

ಪ್ರಶ್ನೆ : ಬೆರಳುಗಳಿಂದ ಕಲ್ಲು/ಲೋಟವನ್ನು ಎತ್ತಿದಾಗ ಏನು ಅನುಭವವಾಯಿತು?

ಉತ್ತರ : ಜಗ್ಗಿದಂತೆ ಆಯಿತು. ( ಇದೇ ರೀತಿಯ ಬೇರೆ ಉತ್ತರ)

ಪ್ರಶ್ನೆ : ಪುಸ್ತಕಗಳನ್ನು ಕೈಮೇಲೆ ಇಟ್ಟುಕೊಂಡಾಗ, ಬೆರಳುಗಳಿಂದ ಕಲ್ಲು / ಲೋಟ ಎತ್ತಿದಾಗ ಜಗ್ಗಿದಂತೆ ಆಯಿತು ಏಕೆ ?

ಉತ್ತರ : ಅವುಗಳಿಗೆ ಭಾರವಿದೆ.

ಎಲ್ಲಾ ವಸ್ತುಗಳಿಗೂ ಭಾರ ( ತೂಕ ) ಇದೆ , ಎಂದು ಶಿಕ್ಷಕರು ತಿಳಿಸಿ , ಗಾಳಿಗೂ ಭಾರವಿದೆ ಎಂಬದನ್ನು ಕಡ್ಡಿ ಮತ್ತು ಬಲೂನ್ ಪ್ರಯೋಗ ( ಪಠ್ಯ ಪುಸ್ತಕದಲ್ಲಿ ವಿವರಿಸಲಾಗಿದೆ ) ಪ್ರಯೋಗವನ್ನೂ ಮಾಡಿಸಬಹುದು. (ಎಲ್ಲಾ ಪದಾರ್ಥಗಳಿಗೂ ಭಾರವಿದೆ ಮತ್ತು ಎಲ್ಲಾ ಪದಾರ್ಥಗಳು ಸ್ಥಳವನ್ನು ಆಕ್ರಮಿಸಿಕೊಳ್ಳುತ್ತದೆ. ಆದ್ದರಿಂದ ಇವುಗಳಿಗೆ ದ್ರವ್ಯ ಎಂದು ಕರೆಯುವರು ) ಶಿಕ್ಷಕರು ದ್ರವ್ಯದ ಅರ್ಥವನ್ನು ವಿದ್ಯಾರ್ಥಿಗಳಿಂದ ಹೇಳಿಸುವುದು.

**ಸಿ. ದ್ರವ್ಯದ ಸ್ಥಿತಿಗಳು** :

**ಅಗತ್ಯ ಸಾಮಗ್ರಿಗಳು** : ರಬ್ಬರ್, ಕಲ್ಲು, ತಂತಿ, ಪುಸ್ತಕ, ಗಾಜಿನ ಲೋಟದಲ್ಲಿ ನೀರು, ಗಾಳಿ ತುಂಬಿದ ಬಲೂನ್/ಪ್ಲಾಸ್ಟಿಕ್ ಚೀಲ, ಖಾಲಿ ಸೀಸೆ.(4-5 ಜನರ ಗುಂಪಿಗೂ ಈ ವಸ್ತುಗಳಿರಲಿ)

**ಚಟುವಟಿಕೆ 1** : ಪ್ರತಿ ವಿದ್ಯಾರ್ಥಿಯು ತಮ್ಮ ಮುಂದಿರುವ ವಸ್ತುಗಳನ್ನು ಗಮನಿಸಲು ಶಿಕ್ಷಕರು ತಿಳಿಸುವುದು ಅನಂತರ ಪ್ರಶ್ನಿಸುವುದು.

ಪ್ರಶ್ನೆ : ಯಾವ ವಸ್ತುಗಳನ್ನು ಕೈಯಲ್ಲಿ ಹಿಡಿದುಕೊಳ್ಳಬಹುದು?
ಉತ್ತರ : ರಬ್ಬರ್, ಪುಸ್ತಕ, ತಂತಿ, ಕಲ್ಲುಗಳನ್ನು ಕೈಯಲ್ಲಿ ಹಿಡಿಯಬಹುದು.
ಪ್ರಶ್ನೆ : ನೀರು ಯಾವುದರಲ್ಲಿ ತುಂಬಲಾಗಿದೆ ?
ಉತ್ತರ : ಲೋಟದಲ್ಲಿ ತುಂಬಲಾಗಿದೆ.
ಪ್ರಶ್ನೆ : ನೀರನ್ನು ಕೈಯಲ್ಲಿ ಹಿಡಿದುಕೊಳ್ಳಲಾಗುವುದಿಲ್ಲ ಏಕೆ ?
ಉತ್ತರ : ನೀರು ಹರಿದುಹೋಗುತ್ತದೆ ( ಇದೇ ರೀತಿಯ ಬೇರೆ ಉತ್ತರ)
ಪ್ರಶ್ನೆ : ಬಲೂನ್‌ನಲ್ಲಿ ಏನಿದೆ ?
ಉತ್ತರ : ಗಾಳಿಯಿದೆ.
ಪ್ರಶ್ನೆ : ಗಾಳಿಯನ್ನು ಕೈಯಲ್ಲಿ ಹಿಡಿಯಲಾಗುವುದಿಲ್ಲ ತೆರೆದ ಪಾತ್ರೆಯ
ತುಂಬಲಾಗುವುದಿಲ್ಲ ಏಕೆ ?
ಉತ್ತರ : ಗಾಳಿಗೆ ಹಾರಿ ಹೋಗುವ ಗುಣವಿದೆ.



ಪ್ರಶ್ನೆ : ನಿಮ್ಮ ಮುಂದಿನ ವಸ್ತುಗಳನ್ನು ಎಷ್ಟು ಗುಂಪು ಮಾಡುವಿರಿ ?
ಉತ್ತರ : ಮೂರು ಗುಂಪುಗಳನ್ನಾಗಿ ಮಾಡಬಹುದು.
ಪ್ರಶ್ನೆ : ಮೂರು ಗುಂಪಿನ ವಸ್ತುಗಳಾವುವು ?
ಉತ್ತರ : -----

ಶಿಕ್ಷಕರು ಘನ, ದ್ರವ, ಅನಿಲ- ಎಂದು ಹೇಳಿ ಅವುಗಳ ಗುಣಗಳನ್ನು ತಿಳಿಸುವುದು

**ಭೋಧನಾ ವಿಷಯ :** 1. ದ್ರಾವಣದ ಅರ್ಥ 2. ನೀರು ಸಾರ್ವತ್ರಿಕ ದ್ರಾವಣ
3. ಮಿಶ್ರಣದ ಘಟಕಗಳನ್ನು ಬೇರ್ಪಡಿಸುವ ವಿಧಾನಗಳು.

**1. ದ್ರಾವಣದ ಅರ್ಥ :**

**ಅಗತ್ಯ ಸಾಮಗ್ರಿಗಳು :** ಗಾಜಿನ ಲೋಟ, ನೀರು, ಅಡುಗೆ ಉಪ್ಪು, ಸಕ್ಕರೆ, ಬೆಲ್ಲದ ಪುಡಿ, ಸೋಪಿನ ಪುಡಿ , (4-5 ಜನರ ಗುಂಪಿಗೆ ಈ ವಸ್ತುಗಳು ಅಗತ್ಯ )

**ಚಟುವಟಿಕೆ 1** : ಪ್ರತಿ ಗುಂಪಿನವರು ನೀರು ತುಂಬಿದ ಲೋಟಕ್ಕೆ ಅಡುಗೆ ಉಪ್ಪನ್ನು ಹಾಕಿ, ಪೆನ್ಸಿಲ್‌ನಿಂದ ಕಲಕಲು ಹೇಳಿ, ಶಿಕ್ಷಕರು ಪ್ರಶ್ನಿಸಬೇಕು.

ಪ್ರಶ್ನೆ : ಲೋಟದಲ್ಲಿರುವ ನೀರಿಗೆ ಅಡುಗೆ ಉಪ್ಪನ್ನು ಹಾಕಿ ಕಲಕಿದಾಗ ಏನಾಯಿತು?
ಉತ್ತರ : ಉಪ್ಪು ನೀರಿನಲ್ಲಿ ಕರಗಿತು.
ಪ್ರಶ್ನೆ : ಲೋಟದಲ್ಲಿರುವುದು ಒಂದು ಮಿಶ್ರಣ. ಈ ಮಿಶ್ರಣಕ್ಕೆ ಏನೆಂದು ಹೆಸರು.
ಉತ್ತರ : ------

ಶಿಕ್ಷಕರು ದ್ರಾವಣ ಎಂದು ತಿಳಿಸಿ, ದ್ರಾವಣದ ಅರ್ಥವನ್ನು ವಿವರಿಸುವುದು.

**2. ನೀರು ಸಾರ್ವತ್ರಿಕ ದ್ರಾವಕ :**

**ಅಗತ್ಯ ಸಾಮಗ್ರಿಗಳು :** 3 ಗಾಜಿನ ಲೋಟಗಳು, ಕಲ್ಲು, ತಂತಿ, ಉಪ್ಪು, ಸಕ್ಕರೆ, ಬೆಲ್ಲದ ಪುಡಿ , (4-5 ಜನರ ಗುಂಪಿಗೆ ಇವೆಲ್ಲಾ ಇರಲಿ)

**ಚಟುವಟಿಕೆ 1** : ಪ್ರತಿ ಗುಂಪಿನವರು ಒಂದು ಗಾಜಿನ ಲೋಟದಲ್ಲಿ ನೀರನ್ನು ತುಂಬಿ ಅದಕ್ಕೆ ಕಲ್ಲು ಹಾಕಿ ಪೆನ್ಸಿಲ್‌ನಿಂದ ಚೆನ್ನಾಗಿ ಕಲಕಲು ಶಿಕ್ಷಕರು ತಿಳಿಸಬೇಕು.

**ಚಟುವಟಿಕೆ 2** : ಎರಡನೆಯ ಲೋಟದಲ್ಲಿ ನೀರನ್ನು ತುಂಬಿ ತಂತಿಯನ್ನು ಹಾಕಿ, ಪೆನ್ಸಿಲ್‌ನಿಂದ ಚೆನ್ನಾಗಿ ಕಲಕಲು ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು.

**ಚಟುವಟಿಕೆ 3** : ಪ್ರತಿ ಗುಂಪಿನವರು ಮೂರನೇ ಲೋಟದಲ್ಲಿ ನೀರನ್ನು ತುಂಬಲು ತಿಳಿಸುವುದು. ಒಂದು ಗುಂಪಿನವರು, ಅಡುಗೆ ಉಪ್ಪು, ಇನ್ನೊಂದು ಗುಂಪಿನವರು ಸಕ್ಕರೆಯನ್ನು , ಮತ್ತೊಂದು ಗುಂಪಿನವರು ಬೆಲ್ಲದ ಪುಡಿಯನ್ನು ಹಾಕಿ ಕಲಕಲು ತಿಳಿಸಬೇಕು. ಹಾಗೆ ಮಾಡಿದ ಮೇಲೆ ಪ್ರಶ್ನಿಸುವುದು.

ಪ್ರಶ್ನೆ : ನೀರು ಯಾವ ವಸ್ತುಗಳನ್ನು ಕರಗಿಸಿಕೊಳ್ಳಲಿಲ್ಲ.

ಉತ್ತರ : ಕಲ್ಲು, ತಂತಿ
ಪ್ರಶ್ನೆ : ನೀರಿನಲ್ಲಿ ಯಾವ ವಸ್ತುಗಳನು ಕರಗಿದವು.
ಉತ್ತರ : ಉಪ್ಪು, ಸಕ್ಕರೆ, ಬೆಲ್ಲ.
ಪ್ರಶ್ನೆ : ನೀರಿನಲ್ಲಿ ಬೇರೆ ಯಾವ ವಸ್ತುಗಳು ಕರಗುತ್ತವೆ ?
ಉತ್ತರ : ಗ್ಲೂಕೋಸ್ ಪುಡಿ. ಅಡಿಗೆ ಸೋಡಾ, ಸೋಪಿನ ಪುಡಿ ಇತ್ಯಾದಿ.

ನೀರು ಬಹಳ ವಸ್ತುಗಳನ್ನು ಕರಗಿಸಿಕೊಳ್ಳುತ್ತದೆ. ಆದುದರಿಂದ ನೀರನ್ನು ಸಾರ್ವತ್ರಿಕ ದ್ರಾವಕ ಎಂದು ಕರೆಯುವರೆಂದು ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು. ದ್ರಾವಣದ ಅರ್ಥವನ್ನು ವಿವರಿಸಬೇಕು.

**3. ಮಿಶ್ರಣದ ಘಟಕಗಳನ್ನು ಬೇರ್ಪಡಿಸುವ ವಿಧಾನಗಳು :**
ಎ. ಬಸಿಯುವಿಕೆ, ಬಿ. ಸೋಸುವಿಕೆ, ಸಿ. ಇಂಗಿಸುವಿಕೆ

ಪಠ್ಯ ಪುಸ್ತಕದಲ್ಲಿ ವಿವರರಿಸಲಾಗಿರುವ ಪ್ರಯೋಗಗಳನ್ನು ಶಿಕ್ಷಕರು 4-5 ಜನರ ಗುಂಪುಗಳಲ್ಲಿ ವಿದ್ಯಾರ್ಥಿಗಳಿಂದ ಮಾಡಿಸುವುದು. ಪ್ರಯೋಗಗಳಿಗೆ ಸ್ಥಳೀಯ ವಸ್ತುಗಳನ್ನೆ ಬಳಸಿಕೊಳ್ಳಬಹುದು.

1. ಬೀಕರ್‌ಗಳಿಗೆ ಬದಲು ಗಾಜಿನ / ಬಣ್ಣವಿಲ್ಲದ ಪ್ಲಾಸ್ಟಿಕ್ ಲೋಟಗಳು
2. ಗಾಜಿನ ಆಲಿಕೆಗೆ ಬದಲು ಪ್ಲಾಸ್ಟಿಕ್ ಆಲಿಕೆ.
3. ಪಿಂಗಾಣಿ ಬಟ್ಟಲಿಗೆ ಬದಲು ಸೀಸೆಗಳು ತಗಡಿನ ಮುಚ್ಚಳ (ಮುಚ್ಚಳಕ್ಕೆ ತಂತಿಯನ್ನು ಸುತ್ತಿ ಹಿಡಿಯನ್ನು ಮಾಡಿಕೊಳ್ಳಬೇಕು)
4. ಕಾಯಿಸಲು ಮದ್ಯಸಾರ ದೀಪದ ಬದಲಿಗೆ ಮೇಣದ ಬತ್ತಿ.



---

## ಗಾಳಿ ಮತ್ತು ನೀರು

**ಬೋಧನಾ ವಿಷಯಗಳು :** 1. ಗಾಳಿಗೆ ಒತ್ತಡವಿದೆ
2. ಬಾಷ್ಪೀ ಭವನ
3. ಜಲಚಕ್ರ- ಘನೀಕರಿಸುವಿಕೆ

**1. ಗಾಳಿಗೆ ಒತ್ತಡವಿದೆ :**

**ಅಗತ್ಯ ಸಾಮಗ್ರಿಗಳು :** ಒಂದು ಗಾಜಿನ ಲೋಟ, ನೀರು, ವೆಡ್ಡಿಂಗ್ ಕಾರ್ಡು/ ಬರೆದಿರುವ ಪೊಸ್ಟ್‌ಕಾರ್ಡು (4-5 ಜನರ ಗುಂಪಿಗೆ ಇವು ಇರಲಿ)

**ಚಟುವಟಿಕೆ :** ಗಾಜಿನ ಲೋಟದಲ್ಲಿ ನೀರನ್ನು ತುಂಬಿ, ಅದರ ಮೇಲೆ ಕಾರ್ಡನ್ನು ಇಡಿ. ಕಾರ್ಡನ್ನು ಹಿಡಿದು ಲೋಟವನ್ನು ತಲೆಕೆಳಗುಮಾಡಿ, ಕಾರ್ಡನ್ನು ಕೈಬಿಡಿ. ಕಾರ್ಡುಕೆಳಗೆ ಬೀಳುವುದಿಲ್ಲ. ನಿಧಾನವಾಗಿ ಲೋಟವನ್ನು ಬೇರೆ ಬೇರೆ ಕಡೆಗೆ ಹಿಡಿಯಿರಿ ಆಗಲು ಕಾರ್ಡು ಬೀಳದು. ವಿದ್ಯಾರ್ಥಿಗಳಿಂದ ಚಟುವಟಿಕೆಯನ್ನು ಮಾಡಿಸಿದ ಮೇಲೆ ಪ್ರಶ್ನಿಸುವುದು.

ಪ್ರಶ್ನೆ : ಲೋಟವನ್ನು ತಲೆಕೆಳಗು ಮಾಡಿದರೂ ಕಾರ್ಡು ಬೀಳುವುದಿಲ್ಲ ಏಕೆ ?
ಉತ್ತರ : ಕಾರ್ಡನ್ನು ಗಾಳಿ ಒತ್ತಿ ಹಿಡಿದಿದೆ.
ಪ್ರಶ್ನೆ : ಈ ಪ್ರಯೋಗದಿಂದ ನಿಮಗೇನು ತಿಳಿಯುತ್ತದೆ ?
ಉತ್ತರ : -------

ಗಾಳಿಗೆ ಒತ್ತಡವಿದೆ ಎಂದು ಶಿಕ್ಷಕರು ತಿಳಿಸಬೇಕು.

(ಒತ್ತಡಕ್ಕೆ ಸಂಬಂಧಿಸಿದ ಇತರ ಪ್ರಯೋಗಗಳನ್ನು ಕಾಲಾವಕಾಶ ದೊರೆತರೆ ಮಾಡಿಸಬಹುದು)

**2. ಭಾಷ್ಪೀಭವನ :**

**ಅಗತ್ಯ ಸಾಮಗ್ರಿಗಳು :** ನೀರು , ತಂತಿಯ ಹಿಡಿಯಿರುವ ತಗಡಿನ ಸೀಸೆಯ ಮುಚ್ಚಳ, ಮೇಣದ ಬತ್ತಿ ಬಟ್ಟೆಯ ಚೂರು, ವೆಡ್ಡಿಂಗ್ ಕಾರ್ಡು/ ನೋಟ್ ಬುಕ್ಕಿನ ರಟ್ಟು ( ಗುಂಪಿಗೆ 1 ಸೆಟ್ )

**ಚಟುವಟಿಕೆ 1 :** ನೆಲವನ್ನು ಬಟ್ಟೆಯಿಂದ ತೇವ ಮಾಡಲಿ, ತೇವವಾದ ಜಾಗದ ಮೇಲೆ ವೆಡ್ಡಿಂಗ್ ಕಾರ್ಡು/ರಟ್ಟನಿಂದ ಗಾಳಿ ಬೀಸಲಿ.

**ಚಟುವಟಿಕೆ 2 :** ಸೀಸೆಯ ಮುಚ್ಚಳದಲ್ಲಿ ನಾಲ್ಕು ಹನಿ ನೀರನ್ನು ತೆಗೆದುಕೊಳ್ಳಲಿ, ಮುಚ್ಚಳವನ್ನು ಮೇಣದ ಬತ್ತಿಯಿಂದ ಕಾಯಿಸಿ.
ವಿದ್ಯಾರ್ಥಿಗಳು ಚಟುಟಿಕೆಗಳನ್ನು ಮಾಡಿ ಮುಗಿಸಿದ ಮೇಲೆ ಶಿಕ್ಷಕರು ಪ್ರಶ್ನಿಸಬೇಕು.

ಪ್ರಶ್ನೆ : ನೆಲದ ಮೇಲಿದ್ದ ನೀರು (ತೇವ) ಎಲ್ಲಿಗೆ ಹೋಯಿತು ? ( ಚಟುವಟಿಕೆ 1)

ಉತ್ತರ : ವಾತಾವರಣಕ್ಕೆ ಹೋಯಿತು.

ಪ್ರಶ್ನೆ : ನೆಲದ ಮೇಲಿನ ನೀರು ವಾತಾವರಣ ಸೇರಲು ಯಾವುದು ಸಹಾಯ ಮಾಡಿತು?

ಉತ್ತರ : ಗಾಳಿ

ಪ್ರಶ್ನೆ : ಮುಚ್ಚಳದಲ್ಲಿದ್ದ ನೀರು ಆವಿಯಾಗಲು ಏನು ಸಹಾಯ ಮಾಡಿತು ?

ಉತ್ತರ : ಶಾಖ

ಪ್ರಶ್ನೆ : ನೀರು ಆವಿಯಾಗುವುದನ್ನು ಏನೆಂದು ಕರೆಯುವರು ?

ನೀರು ಆವಿಯಾಗುವುದನ್ನು ಭಾಷ್ಪಿಭವನ ಎನ್ನುವರೆಂದು ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಿ. ಇದರ ಉಪಯುಕ್ತತೆಯನ್ನು ಜನರು ಮೊದಲಿಂದಲೇ ಹೇಗೆ ಬಳಸಿಕೊಳ್ಳುತ್ತಿದ್ದಾರೆಂದು ಚರ್ಚಿಸುವುದು.

**3. ಜಲ ಚಕ್ರ – ಘನೀಕರಿಸುವಿಕೆ :**

**ಅಗತ್ಯ ಸಾಮಗ್ರಿಗಳು** : ತಂತಿಯ ಹಿಡಿಯಿರುವ ಸೀಸೆಯ ತಗಡಿನ ಮುಚ್ಚಳ , ನೀರು, ಗಾಜಿನ ಲೋಟ ಮೇಣದ ಬತ್ತಿ (4-5 ಜನರ ಗುಂಪಿಗೆ 1 ಸೆಟ್)

**ಚಟುವಟಿಕೆ** : ಸೀಸೆಯ ಮುಚ್ಚಳದಲ್ಲಿ ಅರ್ಧದಷ್ಟು ನೀರನ್ನು ತುಂಬಿ, ಮುಚ್ಚಳವನ್ನು ಮೇಣದ ಬತ್ತಿಯಿಂದ ಕಾಯಿಸಿರಿ. ನೀರು ಆವಿಯಾಗಲು, ಪ್ರಾರಂಭಿಸಿದಾಗ ಆವಿಯ ಮೇಲೆ ತಣ್ಣೀರಿರುವ ಗಾಜಿನ ಲೋಟವನ್ನು ಹಿಡಿಯಿರಿ; ಲೋಟದ ತಳದಲ್ಲಿ ನೀರಿನ ಹನಿ ಶೇಖರವಾಗುವುದನ್ನು ಗಮನಿಸಲು ಶಿಕ್ಷಕರು ವಿದ್ಯಾರ್ಥಿಗಳಿಗೆ ಸೂಚನೆ ನೀಡುವುದು. ಚಟುವಟಿಕೆಯ ನಂತರ ಶಿಕ್ಷಕರು ಘನೀಕರಣದ ಅರ್ಥ ಜಲಚಕ್ರದ ವಿವರಣೆಯನ್ನು ನೀಡುವುದು.



# ನಮ್ಮ ಸುತ್ತಾ ಮುತ್ತಾ

ಮಕ್ಕಳಿಗೆ ಜೀವಿಗಳ ರಚನೆ, ಜೀವಿಗಳ ಲಕ್ಷಣಗಳು : ಜೀವಿಗಳ ವೈವಿಧ್ಯತೆ , ಮತ್ತು ಪರಿಸರ ಮಾಲಿನ್ಯತೆಯ ಬಗ್ಗೆ ಚಟುವಟಿಕೆಗಳ ಮೂಲಕ ಪರಿಚಯ ಮಾಡಿಕೊಡುವುದಲ್ಲದೆ , ತಮ್ಮ ದೇಹದ ಆರೋಗ್ಯ ಕಾಪಾಡಿಕೊಳ್ಳುವ ಉತ್ತಮ ಅಭ್ಯಾಸಗಳನ್ನು ಮನವರಿಕೆ ಮಾಡಿಕೊಡಲಾಗಿದೆ. ಜೀವಶಾಸ್ತ್ರ ಬೋಧನೆಗೆ ಜೀವಂತಿಕೆಯನ್ನು ನೀಡುವುದು. ಈ ವಿಭಾಗದ ಮುಖ್ಯ ಉದ್ದೇಶ.

**ಬೋಧನಾಂಶ ವಿಷಯ** : ಸಜೀವಿಗಳು ಮತ್ತು ನಿರ್ಜೀವಿಗಳು :

**ಚಟುವಟಿಕೆ 1** : ಮಕ್ಕಳನ್ನು ಶಿಕ್ಷಕರು ಶಾಲಾವರಣಕ್ಕೆ ಕಳುಹಿಸಿ, ಅವರಿಗೆ ಕಾಣುವ ವಸ್ತುಗಳನ್ನು ಪಟ್ಟಿ ಮಾಡಿಕೊಂಡುಬರಲು ಹೇಳುವುದು. ಕೆಲವು ವಸ್ತುಗಳನ್ನು ಪ್ಲಾಸ್ಟಿಕ್ ಚೀಲದಲ್ಲಿ ಸಂಗ್ರಹಿಸಿತರಲು ಸೂಚಿಸುವುದು.

**ಚಟುವಟಿಕೆ 2** : ಸಂಗ್ರಹಿಸಿ ತಂದ ವಸ್ತುಗಳನ್ನು ಸಜೀವಿಗಳು ಮತ್ತು ನಿರ್ಜೀವಿಗಳನ್ನಾಗಿ ವಿಂಗಡಿಸುವಂತೆ ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು. ವಿದ್ಯಾರ್ಥಿಗಳು ವಿಂಗಡಿಸುವಾಗ ತಪ್ಪಾದರೆ ಶಿಕ್ಷಕರು ಸರಿಪಡಿಸುವುದು.

**ಚಟುವಟಿಕೆ 3** : ಸಜೀವಿಗಳು ಮತ್ತು ನಿರ್ಜೀವಿಗಳನ್ನು ವಿದ್ಯಾರ್ಥಿಗಳು ವಿಂಗಡಿಸಿದ ಮೇಲೆ, ಶಿಕ್ಷಕರು ಸಜೀವಿಗಳ ಲಕ್ಷಣಗಳ ಬಗ್ಗೆ ಪ್ರಶ್ನಿಸುತ್ತಾ ಉತ್ತರಗಳನ್ನು ಪಡೆದು ಕಪ್ಪು ಹಲಗೆಯ ಮೇಲೆ ಬರೆಯಬೇಕು.
**ಉದಾ** : ಬೆಳವಣಿಗೆ, ಆಹಾರ, ಚಲನೆ, ಸಂತಾನೋತ್ಪತ್ತಿ ಇತ್ಯಾದಿ

**ಬೋಧನಾ ವಿಷಯ** : ಸಜೀವಿಗಳ ಲಕ್ಷಣಗಳು :

**1. ಬೆಳವಣಿಗೆ** :
**ಚಟುವಟಿಕೆ 1** : ಪ್ರಶ್ನೆಯ ಮೂಲಕ ಶಿಕ್ಷಕರು ಚಟುವಟಿಕೆಗೆ ಚಾಲನೆ ಕೊಡುವುದು ?
ಪ್ರಶ್ನೆ : ಕೋಳಿ ಹೇಗೆ ಹುಟ್ಟುತ್ತದೆ ?
ಉತ್ತರ : ಮೊಟ್ಟೆಯಿಂದ ಕೋಳಿ ಮರಿ ಹುಟ್ಟುತ್ತದೆ.
ಪ್ರಶ್ನೆ : ಕೋಳಿ ಮರಿಯು ಹುಟ್ಟಿದಾಗ ಹೇಗೆ ಇರುತ್ತದೆಯೇ ಹಾಗೆಯೇ ಇರುತ್ತದೆ ?




ಉತ್ತರ : ಇಲ್ಲ ಬೆಳೆಯುತ್ತದೆ.

ಆಗ ಶಿಕ್ಷಕರು ಸಿದ್ಧಪಡಿಸಿದ ಚಿತ್ರಪಟವಿದ್ದರೆ ಪ್ರದರ್ಶಿಸುವುದು. ಇಲ್ಲದಿದ್ದರೆ ಚಿತ್ರಗಳನ್ನು ಕಪ್ಪು ಹಲಗೆಯ ಮೇಲೆ ಬರೆದು ಮಕ್ಕಳಿಗೂ ಬರೆದುಕೊಳ್ಳಲು ತಿಳಿಸುವುದು.



**ಚಟುವಟಿಕೆ 2** : ಚಿತ್ರ 1 ರಂತೆಯೇ ಪ್ರಶ್ನೆಯಿಂದ ಚಟುವಟಿಕೆಯನ್ನು ಪ್ರಾರಂಭಿಸಿ, ಮನುಷ್ಯ ಬೆಳೆಯುತ್ತಾನೆಂದು ಶಿಕ್ಷಕರು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಡುವುದು/ ಚಿತ್ರ ಬರೆಸಲು ಸಾಧ್ಯವಿದೆ.



**ಚಟುವಟಿಕೆ 3** : ಮಾವಿನ ಮರ ಹೇಗೆ ಬೆಳೆಯುತ್ತದೆ ? ಎಂದು ಪ್ರಶ್ನಿಸುವುದರಿಂದ ಚಟುವಟಿಕೆಯನ್ನು ಆರಂಭಿಸಬಹುದು. ಹಿಂದಿನಂತೆಯೇ ಚಿತ್ರಪಟ ಪ್ರದರ್ಶಿಸಿ/ ಚಿತ್ರಗಳನ್ನು ಬರೆಸಿ ಸಸ್ಯಗಳು ಹೇಗೆ ಬೆಳೆಯುತ್ತವೆ ಎಂಬುದನ್ನು ಶಿಕ್ಷಕರು ಮನವರಿಕೆ ಮಾಡಿಕೊಡಬೇಕು.



**2. ಆಹಾರ ಸೇವನೆ :**

**ಚಟುವಟಿಕೆ 1** : ಶಿಕ್ಷಕರು ಪ್ರಶ್ನಿಸುವುದರ ಮೂಲಕ ಚಟುವಟಿಕೆಯನ್ನು ಪ್ರಾರಂಭಿಸಬೇಕು.

ಪ್ರಶ್ನೆ : ಶಾಲೆಗೆ ಬರುವಾಗ ನೀವು ಏನನ್ನು ತಿಂದಿದ್ದೀರಿ ?

ಉತ್ತರ : ಹಲವು ರೀತಿಯ ಉತ್ತರಗಳು ಬರುತ್ತವೆ. ರೊಟ್ಟಿ, ಚಿತ್ರಾನ್ನ, ಮುದ್ದೆ, ಅನ್ನಸಾರು ಇತ್ಯಾದಿ.

ಪ್ರಶ್ನೆ : ನೀವು ಊಟ - ತಿಂಡಿ ತೆಗೆದುಕೊಳ್ಳದಿದ್ದರೆ ಏನಾಗುತ್ತದೆ ?

ಉತ್ತರ : ಸುಸ್ತಾಗುತ್ತದೆ, ಸತ್ತು ಹೋಗುತ್ತೇವೆ.

ಆದುದರಿಂದ ನಮ್ಮಂತೆ ಎಲ್ಲಾ ಪ್ರಾಣಿಗಳು ಮತ್ತು ಸಸ್ಯಗಳು ಬದುಕಲು ಆಹಾರ ಸೇವಿಸುತ್ತವೆಂದು ಶಿಕ್ಷಕರು ಹೇಳುವುದು.

**ಚಟುವಟಿಕೆ 3** : ಬೇರೆ ಬೇರೆ ಪ್ರಾಣಿಗಳು ಆಹಾರ ಸೇವಿಸುತ್ತಿರುವ ಚಿತ್ರಪಟಗಳನ್ನು ಪ್ರದರ್ಶಿಸುವುದು.

ಉದಾ : ಮಗು ಹಾಲು ಕುಡಿಯುತ್ತಿರುವುದು.

ಹಕ್ಕಿ ಹುಳು ತಿನ್ನುತ್ತಿರುವುದು
ಆನೆ ಮರವನ್ನು ಮುರಿಯುತ್ತಿರುವುದು
ಸೊಳ್ಳೆ ಕಚ್ಚುತ್ತಿರುವುದು ಇತ್ಯಾದಿ.

**3. ಉಸಿರಾಟ :**

**ಚಟುವಟಿಕೆ 1** : ಎಲ್ಲಾ ವಿದ್ಯಾರ್ಥಿಗಳು ತಮ್ಮ ಮೂಗಿನ ಕೆಳಗೆ ಕೈಯನ್ನು ಇಟ್ಟುಕೊಳ್ಳುವಂತೆ ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು. ವಿದ್ಯಾರ್ಥಿಗಳು ಕೈಯನ್ನು ಇಟ್ಟುಕೊಂಡಿರುವುದನ್ನು ( 1/2 ನಿಮಿಷ ) ಖಚಿತವಾದ ಮೇಲೆ ಪ್ರಶ್ನಿಸುವುದು.

ಪ್ರಶ್ನೆ : ನಿಮ್ಮ ಕೈಗೆ ಆದ ಅನುಭವವೇನು ?
ಉತ್ತರ : ಗಾಳಿ ಬೀಸಿದಂತೆ ಆಯಿತು.
ಪ್ರಶ್ನೆ : ನಿಮ್ಮ ಕೈಗೆ ಬೀಸಿದ ಗಾಳಿ ಎಲ್ಲಿಂದ ಬಂದಿತು ?
ಉತ್ತರ : ನಮ್ಮ ದೇಹದಿಂದ ಉಸಿರಾಟದಿಂದ ಬಂದಿತು.

ನಮ್ಮಂತೆ ಎಲ್ಲಾ ಜೀವಿಗಳು ಉಸಿರಾಡುತ್ತವೆ ಎಂದು ಶಿಕ್ಷಕರು ಎಂದು ಹೇಳಿ ಖಚಿತಪಡಿಸಲು ಬೇರೊಂದು ಚಟುವಟಿಕೆಯನ್ನು ವಿದ್ಯಾರ್ಥಿಗಳಿಂದ ಮಾಡಿಸುವುದು.

**ಚಟುವಟಿಕೆ 3** : ಒಬ್ಬ ಹುಡುಗನನ್ನು ಬೆಂಚಿನ ಮೇಲೆ ಅಂಗಾತ ( ಮುಖ ಮೇಲೆ ಮಾಡಿ) ಮಲಗಿಸುವುದು. ಆತನಿಗೆ ಜೋರಾಗಿ ಉಸಿರಾಡಲು ತಿಳಿಸುವುದು. ಇತರೆ ವಿದ್ಯಾರ್ಥಿಗಳು ಮಲಗಿರುವ ವಿದ್ಯಾರ್ಥಿಯ ಎದೆಯ ಚಲನವಲನವನ್ನು ಗಮನಿಸುವಂತೆ ಸೂಚಿಸುವುದು.

**4. ಚಲನೆ :**

**ಚಟುವಟಿಕೆ** : ಒಬ್ಬನನ್ನು ಹತ್ತಿರಕ್ಕೆ ಶಿಕ್ಷಕರು ಕರೆಯುವುದು. ಮತ್ತೊಬ್ಬನಿಗೆ ಹೊರಗೆ ಹೋಗಿ ವಸ್ತುವೊಂದನ್ನು ತರಲು ಹೇಳುವುದು. ನಂತರ ಪ್ರಶ್ನಿಸುವುದು.

ಪ್ರಶ್ನೆ : ಇಬ್ಬರು ಹುಡುಗರು ಏನು ಮಾಡಿದರು.
ಉತ್ತರ : (ಬೇರೆ ಬೇರೆ ಉತ್ತರ ಬರಬಹುದು) ಚಲನೆ

ಆಗ ಶಿಕ್ಷಕರು ಚಲನೆಯ ಅರ್ಥ ಮತ್ತು ಅದರ ಅಗತ್ಯದ ಬಗ್ಗೆ ವಿವರಿಸುವುದು.

**ಸಂತಾನೋತ್ಪತ್ತಿ :**

**ಚಟುವಟಿಕೆ 1** : ವಿದ್ಯಾರ್ಥಿಗಳನ್ನು ಶಾಲೆಯಿಂದ ಹೊರಗೆ ಕಳುಹಿಸಿ, ಸಸ್ಯದ ವಿವಿಧ ಭಾಗಗಳನ್ನು ಸಂಗ್ರಹಿಸಿ ತರುವಂತೆ ಶಿಕ್ಷಕರು ಸೂಚನೆ ನೀಡಬೇಕು.

**ಚಟುವಟಿಕೆ 2** : ಸಂಗ್ರಹಿಸಿ ತಂದ ವಸ್ತುಗಳಲ್ಲಿ ಹಣ್ಣು ಮತ್ತು ಬೀಜಗಳನ್ನು ಬೇರ್ಪಡಿಸಲು ತಿಳಿಸುವುದು. ನಂತರ ಪ್ರಶ್ನಿಸುವುದು.

ಪ್ರಶ್ನೆ : ಸಸ್ಯಗಳು ಬೀಜಗಳನ್ನು ಏಕೆ ಬಿಡುತ್ತವೆ ?
ಉತ್ತರ : ಹೊಸ ಸಸಿಗಳು ಬೆಳೆಯಲು.
ಪ್ರಶ್ನೆ : ಮಾವಿನ ಬೀಜದಿಂದ ಯಾವ ಸಸಿ ಹುಟ್ಟುತ್ತದೆ ?
ಉತ್ತರ : ಮಾವಿನ ಸಸಿ .
ಪ್ರಶ್ನೆ : ಬೇವಿನ ಬೀಜದಿಂದ ಯಾವ ಸಸಿ ಹುಟ್ಟುತ್ತದೆ ?
ಉತ್ತರ : ಬೇವಿನ ಸಸಿ :
ಶಿಕ್ಷಕರು: ಪ್ರಾಣಿಗಳ ಬಗ್ಗೆ ಪ್ರಶ್ನಿಸಲು ಪ್ರಾರಂಭಿಸಬೇಕು.
ಪ್ರಶ್ನೆ : ಕೋಳಿ ಮೊಟ್ಟೆಯಿಂದ ಯಾವ ಮರಿ ಹುಟ್ಟುತ್ತದೆ ?
ಉತ್ತರ : ಕೋಳಿ ಮರಿ.
ಪ್ರಶ್ನೆ : ಬೆಕ್ಕು ಯಾವ ಮರಿಗೆ ಜನ್ಮ ಕೊಡುತ್ತದೆ ?
ಉತ್ತರ : ಬೆಕ್ಕಿನ ಮರಿಗೆ

ಹೀಗೆ ಪ್ರಾಣಿಗಳು ಮತ್ತು ಸಸ್ಯಗಳನ್ನು ತಮ್ಮನ್ನೆ ಹೋಲುವ ಜೀವಿಗಳಿಗೆ ಜನ್ಮ ಕೊಡುತ್ತವೆ. ಈ ಲಕ್ಷಣಕ್ಕೆ ಸಂತಾನೋತ್ಪತ್ತಿ ಎನ್ನುವರೆಂದು ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು.

**ಬೋಧನಾ ವಿಷಯ : ಸಸ್ಯದ ಭಾಗಗಳು ಮತ್ತು ಸಸ್ಯಗಳ ವರ್ಗೀಕರಣ :**

**ಚಟುವಟಿಕೆ 1** : ಶಿಕ್ಷಕರು ಎಲ್ಲಾ ವಿದ್ಯಾರ್ಥಿಗಳನ್ನು ಶಾಲೆಯ ಹೊರಗಡೆ ಕಳುಹಿಸುವುದು. ಪ್ರತಿಯೊಬ್ಬರು ಎರಡೆರಡು ಸಸ್ಯಗಳನ್ನು ಬೇರು ಸಮೇತ ಕಿತ್ತುಕೊಂಡು ಬರಲು ಸೂಚನೆ ಕೊಡುವುದು. (ಶಾಲೆಗೆ ಬರುವಾಗಲೇ ತಂದಿರುವಂತೆ ಹೇಳಿರಬಹುದು)

**ಚಟುವಟಿಕೆ 2** : ಪ್ರತಿಯೊಬ್ಬರು ಕೈಯಲ್ಲಿ ಒಂದು ಸಸ್ಯವನ್ನು ಹಿಡಿದುಕೊಳ್ಳುವಂತೆ ಶಿಕ್ಷಕರು ತಿಳಿಸುವುದು ಮತ್ತು ಅದರ ಒಂದೊಂದು ಭಾಗವನ್ನು ವಿದ್ಯಾರ್ಥಿಗಳಿಂದ

ಹೇಳಿಸುವುದು. ವಿದ್ಯಾರ್ಥಿಗಳು ಹೇಳದೆಯಿರುವ ಭಾಗಗಳನ್ನು ಶಿಕ್ಷಕರೇ ಹೇಳುವುದು.

**ಚಟುವಟಿಕೆ 3** : ಪ್ರತಿಯೊಬ್ಬರು ಒಂದು ಏಕದಳ ( ರಾಗಿ / ಹುಲ್ಲು / ಜೋಳ ) ಮತ್ತು ದ್ವಿದಳ ( ಹುರುಳಿ ) ಕಡಲೇಗಿಡ ಸಸ್ಯವನ್ನು ಹಿಡಿದುಕೊಳ್ಳಲು ತಿಳಿಸುವುದು. ಅವುಗಳ ಎಲೆ ಮತ್ತು ಬೇರುಗಳನ್ನು ಪರೀಕ್ಷಿಸಲು ಹೇಳಿ. ನಂತರ ಶಿಕ್ಷಕರು ವ್ಯತ್ಯಾಸಗಳನ್ನು ಹೇಳಿಸುವುದು.

**ಚಟುವಟಿಕೆ 4** : ಚಟುವಟಿಕೆಯನ್ನು ಶಿಕ್ಷಕರು ಪ್ರಶ್ನಿಸುವುದರ ಮೂಲಕ ಪ್ರಾರಂಭಿಸಬೇಕು.

ಪ್ರಶ್ನೆ : ನೀವು ತಂದಿರುವ ಸಸ್ಯಗಳಲ್ಲಿ ನೆಲದಲ್ಲೇ ಬೆಳೆಯುವ ಸಸ್ಯಗಳು ಯಾವುವು?

ಉತ್ತರ : ಹುಲ್ಲು, ಮುಳ್ಳುಗಿಡ, ತುಂಬೆ, ತುಳಸಿ ಇತ್ಯಾದಿ ಇವುಗಳನ್ನು ಮೂಲಿಕೆಗಳೆಂದು ಕರೆಯುತ್ತಾರೆಂದು ಶಿಕ್ಷಕರು ತಿಳಿಸಬೇಕು.

ಪ್ರಶ್ನೆ : 4 - 5 ಅಡಿ ಎತ್ತರಕ್ಕೆ ಬೆಳೆಯುವ ಸಸ್ಯಗಳನ್ನು ಹೇಳಿ.

ಉತ್ತರ : ಬಿರಿದರೆ, ರೋಜಾ, ಗುಲಾಬಿ- ಇತ್ಯಾದಿ
ಇವುಗಳನ್ನು ಪೊದರುಗಳೆಂದು ಕರೆಯುವರೆಂದು ಶಿಕ್ಷಕರು ತಿಳಿಸಬೇಕು.







ಪ್ರಶ್ನೆ : ಹೆಚ್ಚು ಎತ್ತರವಾಗಿ ಬೆಳೆಯುವ ಸಸ್ಯಗಳನ್ನು ಹೇಳಿ
ಉತ್ತರ : ತೆಂಗು, ಮಾವು, ಬೇವು, ಅಡಿಕೆ ಇತ್ಯಾದಿ
ಇವುಗಳನ್ನು ಮರಗಳೆಂದು ಕರೆಯುವರೆಂದು ಶಿಕ್ಷಕರು ತಿಳಿಸಿ. ಪ್ರಶ್ನಿಸಬೇಕು.
ಪ್ರಶ್ನೆ : ಸಸ್ಯಗಳನ್ನು ಎಷ್ಟು ಗುಂಪುಗಳನ್ನಾಗಿ ಮಾಡಬಹುದು ?
ಉತ್ತರ : ಮೂರು ಗುಂಪುಗಳು.
ಪ್ರಶ್ನೆ : ಸಸ್ಯಗಳ ಮೂರು ಗುಂಪುಗಳಾಗುವವು ?
ಉತ್ತರ : 1. ಮೂಲಿಕೆಗಳು, 2. ಪೊದರಗಳು, 3 ಮರಗಳು.

**ಬೋಧನಾ ವಿಷಯ : ಪ್ರಾಣಿಯ ಭಾಗಗಳು :**

**ಚಟುವಟಿಕೆ 1** : ಒಂದು ಪ್ರಾಣಿಯ ಚಿತ್ರವನ್ನು ಪ್ರದರ್ಶಿಸಿ ವಿದ್ಯಾರ್ಥಿಗಳಿಂದ ಶಿಕ್ಷಕರು ಭಾಗಗಳನ್ನು ಹೇಳಿಸುವುದು. ಉದಾ: ಮೀನು, ಪಾರಿವಾಳ, ಆನೆ

**ಚಟುವಟಿಕೆ 2** : ಒಬ್ಬ ಹುಡುಗನನ್ನು ನಿಲ್ಲಿಸಿ, ಶಿಕ್ಷಕರು ಆತನಲ್ಲಿರುವ ಭಾಗಗಳನ್ನು ವಿದ್ಯಾರ್ಥಿಗಳಿಂದ ಹೇಳಿಸುವುದು.

**ಚಟುವಟಿಕೆ 3** : ನಾಯಿ ಮರಿ, ಕುರಿ ಮರಿಯ ಭಾಗಗಳನ್ನು ಶಿಕ್ಷಕರು ವಿದ್ಯಾರ್ಥಿಗಳಿಂದ ಹೇಳಿಸುವುದು. ( ಸಾಕುಪ್ರಾಣಿಯನ್ನು ಒಬ್ಬ ಹುಡುಗನಿಗೆ ಮೊದಲೇ ತಂದಿರುವಂತೆ ತಿಳಿಸಿರಬೇಕು)

**ಬೋಧನಾ ವಿಷಯ : ನಮ್ಮ ಜ್ಞಾನೇಂದ್ರಿಯಗಳು ಮತ್ತು ಅವುಗಳ ರಕ್ಷಣೆ :**

**ಚಟುವಟಿಕೆ 1** : ಶಿಕ್ಷಕರು ಎಲ್ಲಾ ವಿದ್ಯಾರ್ಥಿಗಳು ಕಣ್ಣು ಮುಚ್ಚಿಕೊಳ್ಳಲು ಸೂಚಿಸಿ ಕೈಯಲ್ಲಿ ಒಂದು ವಸ್ತುವನ್ನು ಹಿಡಿದು (ಪೆನ್ನು , ಪುಸ್ತಕ) ಪ್ರಶ್ನಿಸಬೇಕು.

ಪ್ರಶ್ನೆ : ನನ್ನ ಕೈಯಲ್ಲಿ ಏನಿದೆ ?
ಉತ್ತರ : ಒಬ್ಬೊಬ್ಬರು ಒಂದೊಂದು ಉತ್ತರ ಹೇಳುವರು.
ಪ್ರಶ್ನೆ : ನನ್ನ ಕೈಯಲ್ಲಿದ್ದ ವಸ್ತುವನ್ನು ನೀವು ಹೇಳಲಾಗಲಿಲ್ಲ. ಏಕೆ ?
ಉತ್ತರ : ಕಣ್ಣುಗಳನ್ನು ಮುಚ್ಚಿಕೊಂಡಿದ್ದೆವು.
ಪ್ರಶ್ನೆ : ಹಾಗಾದರೆ ನೋಡಲು ಯಾವ ಅಂಗಗಳು ಬೇಕು ?
ಉತ್ತರ : ಕಣ್ಣುಗಳು.

**ಚಟುವಟಿಕೆಗ 2 :** ಶಿಕ್ಷಕರು ಒಂದು ಗೀತೆಯನ್ನು (ಎಲ್ಲರಿಗೂ ಪರಿಚಯವಿರುವ ಚಿತ್ರಗೀತೆ ) ಹಾಡಬೇಕು. ನಂತರ ಪ್ರಶ್ನಿಸಬೇಕು.

ಉದಾ : ಮಣಿ, ಮಣಿ, ಮಣಿಗೊಂದು ದಾರ.

ಪ್ರಶ್ನೆ : ನಾನು ಹಾಡಿನ ಗೀತೆ ಯಾವ ಸಿನಿಮಾದ್ದು ?

ಉತ್ತರ : ಜನುಮದ ಜೋಡಿ ( ಬೇರೆ ಚಿತ್ರದ್ದಾಗಿದ್ದರೆ ಆ ಚಿತ್ರದ ಹೆಸರನ್ನು ಹೇಳುವರು )

ಪ್ರಶ್ನೆ : ನಾನು ಹಾಡಿದ ಗೀತೆಯನ್ನು ಯಾವ ಅಂಗಗಳಿಂದ ಕೇಳಿಸಿಕೊಂಡಿರಿ ?

ಉತ್ತರ : ಕಿವಿಗಳಿಂದ

ಪ್ರಶ್ನೆ : ಹಾಗಾದರೆ ಕೇಳಲು ಯಾವ ಅಂಗಗಳು ಬೇಕು ?

ಉತ್ತರ : ಕಿವಿಗಳು.

**ಚಟುವಟಿಕೆ 3** : ಶಿಕ್ಷಕರು ಒಂದು ಊದು ಬತ್ತಿಯನ್ನು ತರಗತಿಯ ಕೋಣೆಯಲ್ಲಿ ಹಚ್ಚಿ ಪ್ರಶ್ನಿಸಬೇಕು.

ಪ್ರಶ್ನೆ : ನಿಮಗೆ ಯಾವುದರ ವಾಸನೆ ಬಂದಿದೆ ?

ಉತ್ತರ : ಊದುಬತ್ತಿ ವಾಸನೆ.

ಪ್ರಶ್ನೆ : ವಾಸನೆಯು ಯಾವ ಅಂಗದಿಂದ ನಿಮಗೆ ತಿಳಿಯಿತು ?

ಉತ್ತರ : ಮೂಗಿನಿಂದ.

ಪ್ರಶ್ನೆ : ಹಾಗಾದರೆ ವಾಸನೆ ತಿಳಿಯಲು ಯಾವ ಅಂಗಬೇಕು ?

ಉತ್ತರ : ಮೂಗು.

**ಚಟುವಟಿಕೆ 4 :** ಶಿಕ್ಷಕರು ಪೆಪ್ಪರಮೆಂಟ್, ಹುಣಸೆಹಣ್ಣಿನ ತೊಳೆ, ಉಪ್ಪು, ಬೇವಿನ ಎಲೆ, (ಹಾಗಲಕಾಯಿ) ಗಳನ್ನು ವಿದ್ಯಾರ್ಥಿಗಳಿಗೆ ತಿನ್ನಲು ಕೊಡಬೇಕು. (ಬೇರೆ ಬೇರೆ ತಿನಿಸುಗಳನ್ನು ಬೇರೆ ಬೇರೆ ವಿದ್ಯಾರ್ಥಿಗೆ ) ಅವರು ತಿಂದ ಮೇಲೆ ಪ್ರಶ್ನಿಸಬೇಕು.

ಪ್ರಶ್ನೆ : ನೀವು ತಿಂದ ತಿನಿಸು ಯಾವ ರುಚಿಯಿಂದ ಕೂಡಿತ್ತು ?

ಉತ್ತರ : ಸಿಹಿ, ಹುಳಿ , ಉಪ್ಪು , ಕಹಿ ( ಬೇರೆ ಬೇರೆ ಉತ್ತರಗಳು ಬರುತ್ತವೆ )

ಪ್ರಶ್ನೆ : ನಿಮಗೆ ರುಚಿಯನ್ನು ಗುರುತಿಸಲು ಯಾವ ಅಂಗದಿಂದ ಸಾಧ್ಯವಾಯಿತು?

ಉತ್ತರ : ನಾಲಿಗೆಯಿಂದ

ಪ್ರಶ್ನೆ : ಹಾಗಾದರೆ ರುಚಿಯನ್ನು ಯಾವ ಅಂಗವು ಕಂಡು ಹಿಡಿಯುತ್ತದೆ ?

ಉತ್ತರ : ನಾಲಿಗೆ.

**ಚಟುವಟಿಕೆ 5** : ಎಲ್ಲಾ ವಿದ್ಯಾರ್ಥಿಗಳು ಕಣ್ಣನ್ನು ಮುಚಿಕೊಳ್ಳುವಂತೆ ತಿಳಿಸಿ, ತಮ್ಮ ಎಡಗೈಯ ಮೇಲೆ ಪೆನ್ನುನ್ನು ಉಜ್ಜಿಕೊಳ್ಳುವಂತೆ ಶಿಕ್ಷಕರು ಸೂಚಿಸಬೇಕು. ನಂತರ ಬಲಗೈಯಿಂದ ಎಡಗೈಯನ್ನು ಕಣ್ಣು ಮುಚ್ಚಿಕೊಂಡೇ, ಚಿವುಚಿಕೊಳ್ಳಲು ಹೇಳುವುದು. ನಂತರ ಬಲಗೈಯಿಂದ ಎಡಗೈಯನ್ನು ಕಣ್ಣು ಮುಚ್ಚಿಕೊಂಡೇ ಚಿವುಟಿಕೊಳ್ಳಲು ಹೇಳುವುದು ನಂತರ ಪ್ರಶ್ನಿಸುವುದು.

ಪ್ರಶ್ನೆ : ಚಿವುಟುವುದು, ಉಜ್ಜುವುದು ಕಣ್ಣು ಮುಚ್ಚಿದ್ದರೂ ನಿಮಗೆ ತಿಳಿಯಿತು. ಯಾವ ಅಂಗದಿಂದ ?

ಉತ್ತರ : ಚರ್ಮದಿಂದ ತಿಳಿಯಿತು.

ಪ್ರಶ್ನೆ : ಇದು ಸ್ಪರ್ಶ ಜ್ಞಾನ. ನಮಗೆ ಸ್ಪರ್ಶ ಜ್ಞಾನ ಉಂಟುಮಾಡುವ ಅಂಗಯಾವುದು ?

ಉತ್ತರ : ಚರ್ಮ.

ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ ನಮಗೆ ವಿಶಿಷ್ಟ ಜ್ಞಾನವನ್ನುಂಟು ಮಾಡುತ್ತವೆ. ಆದುದರಿಂದ ಇವುಗಳಿಗೆ ಜ್ಞಾನೇಂದ್ರಿಯ ಗಳೆಂದು ಕರೆಯುವರೆಂದು ಶಿಕ್ಷಕರು ಹೇಳಿ, ಅವುಗಳ ಬಗ್ಗೆ ವಿವರಿಸಬೇಕು.

**ಈ ನೀರು ನಮ್ಮದು :**

**ಚಟುವಟಿಕೆ 1** : **ಆಟ :** ನೀರನ್ನು ಏತಕ್ಕೆ ಬಳಸುತ್ತಾರೆಂದು ಪ್ರತಿ ವಿದ್ಯಾರ್ಥಿಯು ಅಭಿನಯದ ಮೂಲಕ ಬಂದು ತೋರಿಸುವಂತೆ ಶಿಕ್ಷಕರು ವಿದ್ಯಾರ್ಥಿಗಳಿಗೆ ಸೂಚಿಸಿ. ತಾವು ಮೊದಲು ಅಭಿನಯಿಸಿ ತೋರಿಸಬೇಕು. ( ಒಬ್ಬರು ಮಾಡಿರುವುದನ್ನು ಬೇರೊಬ್ಬರು ಮಾಡುವಂತಿಲ್ಲ ಎಂದು ಸೂಚಿಸಬೇಕು) ಈ ಆಟದಿಂದ ನೀರಿನ ಉಪಯೋಗಗಳು ಮಕ್ಕಳಿಗೆ ಮನವರಿಕೆಯಾಗುತ್ತವೆ.

**ಚಟುವಟಿಕೆ 2** : ಒಂದು ಗಾಜಿನ ಲೋಟದಲ್ಲಿ ನೀರುತೆಗೆದುಕೊಂಡು, ಮತ್ತೊಂದು ಗಾಜಿನ ಲೋಟಕ್ಕೆ 14 ಚಮಚ ನೀರನ್ನು ತೆಗೆದುಹಾಕುವುದು. ಅದರಲ್ಲಿ ಒಂದು ಚಮಚ ಹೊರ ತೆಗೆದು, ಇಷ್ಟು ಮಾತ್ರ ಸಿಹಿನೀರು ಈ ಭೂಮಿಯಲ್ಲಿರುವುದು ಮತ್ತು ಚಮಚ

ನೀರಿನಲ್ಲಿ ಒಂದು ಹನಿ ಮಾತ್ರ ಕುಡಿಯವ ನೀರು ಎಂದು ತಿಳಿಸಬೇಕು.
ಈ ಚಟುವಟಿಕೆಯಿಂದ ನಮಗೆ ಲಭ್ಯವಿರುವ ಸಿಹಿ ನೀರು ಕಡಿಮೆಯಿದೆ ಎಂಬುದು ಮಕ್ಕಳಿಗೆ ತಿಳಿಸಬೇಕು.

**ಚಟುವಟಿಕೆ 3** : ನೀರಿನ ಆಕರಕ್ಕೆ ಭೇಟಿ : ಸ್ಥಳದಲ್ಲಿನ ಕೆರೆ / ಕಟ್ಟೆ / ತೊರೆ / ಮುಂತಾದವುಗಳಿಗೆ ಶಿಕ್ಷಕರು ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿ ಜಲ ಮಾಲಿನ್ಯಕ್ಕೆ ಕಾರಣಗಳನ್ನು ಪಟ್ಟಿಮಾಡುವುದು.

**ಬೋಧನಾ ವಿಷಯ : ಮಾನವ ದೇಹ ಒಂದು ಯಂತ್ರ :**

**ಚಟುವಟಿಕೆ 1** : ಶಾಲಾ ಮೈದಾನದಲ್ಲಿ ವಿದ್ಯಾರ್ಥಿಗಳನ್ನು ಶಿಕ್ಷಕರು ವೃತ್ತಾಕಾರದಲ್ಲಿ ಕುಳ್ಳಿರಿಸಿ ಮಧ್ಯದಲ್ಲಿ ಒಂದು ಸೈಕಲ್ಲನ್ನು ನಿಲ್ಲಿಸುವುದು. ಆದರ ಒಂದೊಂದು ಭಾಗಗಳನ್ನು ಹೆಸರಿಸಲು ವಿದ್ಯಾರ್ಥಿಗಳಿಗೆ ತಿಳಿಸಿ. ಅದರ ಕೆಲಸವನ್ನು ಹೇಳಿಸಬೇಕು.

**ಚಟುವಟಿಕೆ 3** : ವಿದ್ಯಾರ್ಥಿಗಳನ್ನು 4 ಗುಂಪುಮಾಡಿ, ಶಿಕ್ಷಕರು ಒಂದೊಂದು ಗುಂಪನ್ನು ಒಂದೊಂದು ಕೆಲಸದಲ್ಲಿ ತೊಡಗಿಸಬೇಕು.

ಉದಾ : ಒಂದನೆಯ ಗುಂಪಿನವರು ಅಲ್ಲಲ್ಲಿ ಬಿದ್ದಿರುವ ವಸ್ತುಗಳನ್ನು ಆರಿಸಿ. ದೂರ ಹಾಕಿ ಬರಲಿ.
ಎರಡನೆಯ ಗುಂಪಿನವರು ಕಣ್ಣಿಗೆ ಕಂಡದ್ದನ್ನೆಲ್ಲಾ ಪಟ್ಟಿಮಾಡಲಿ
ಮೂರನೆ ಗುಂಪಿನವರು ಯಾವ ಯಾವ ಶಬ್ದಗಳು ಕೇಳುತ್ತವೆಂದು ಪಟ್ಟಿ ಮಾಡಲಿ
ನಾಲ್ಕನೇ ಗುಂಪಿನವರು ಪುಸ್ತಕವನ್ನು ತೆಗೆದು ಜೋರಾಗಿ ಓದಲಿ.

(ಈ ಚಟುವಟಿಕೆಗೆ ಕಾಲವನ್ನು ನಿಗದಿಪಡಿಸಿರಬೇಕು (3-4 ನಿಮಿಷ) ಶಿಕ್ಷಕರು ಎಲ್ಲರನ್ನು ಮತ್ತೆ ವೃತ್ತಾಕಾರದಲ್ಲಿ ಕುಳ್ಳಿರಿಸಿ, ತಾವು ಮಾಡಿದ ಕೆಲಸದಲ್ಲಿ ಯಾವ ಅಂಗಗಳು ತೊಡಗಿಕೊಂಡಿದ್ದವು ಎಂಬುದನ್ನು ಹೇಳಿಸಬೇಕು. ಮತ್ತು ಸೈಕಲ್‌ನಂತೆ ನಮ್ಮ ದೇಹವು ಒಂದು ಯಂತ್ರ ಎಂಬುದನ್ನು ಖಚಿತಪಡಿಸಬೇಕು.)

**ಬೋಧನಾ ವಿಷಯ : ನಮ್ಮ ಆಹಾರ :**

**ಚಟುವಟಿಕೆ 1** : ( ಪ್ರತಿ ವಿದ್ಯಾರ್ಥಿಯು ತಮ್ಮ ಮನೆಯಲ್ಲಿ ಬಳಸುವ ಆಹಾರ ಪದಾರ್ಥಗಳನ್ನು ತರುವಂತೆ ಶಿಕ್ಷಕರು, ಹಿಂದಿನ ದಿನವೇ ತಿಳಿಸಿರಬೇಕು. ವಿದ್ಯಾರ್ಥಿಗಳು ತಂದ ವಸ್ತುಗಳನ್ನು ನೆಲದ ಮೇಲೆ ಹರಡುವುದು. ಅವುಗಳ ಹೆಸರುಗಳನ್ನು

ಹೇಳಿಸುವುದು.

**ಚಟುವಟಿಕೆ 2** : ಹರಡಿರುವ ಆಹಾರ ಪದಾರ್ಥಗಳನ್ನು ಬೇರೆ ಬೇರೆ ರೀತಿಯಲ್ಲಿ ವಿದ್ಯಾರ್ಥಿಗಳಿಂದ , ಶಿಕ್ಷಕರು ವರ್ಗೀಕರಣವನ್ನು ಮಾಡಿಸಬೇಕು.

1. ಧಾನ್ಯಗಳು, 2. ಬೇಳೆಗಳು,
3. ತರಕಾರಿಗಳು 4. ನಾರು ಪದಾರ್ಥಗಳು,
5. ಹಣ್ಣುಗಳು, 6. ಶಕ್ತಿಕೊಡುವ ಪದಾರ್ಥಗಳು,
7. ಬೇಯಿಸಿ ತಿನ್ನುವ ಪದಾರ್ಥಗಳು. 8. ಬೇಯಸದೆ ತಿನ್ನುವ ಪದಾರ್ಥಗಳು

ಇತ್ಯಾದಿ. (ವರ್ಗೀಕರಣದಲ್ಲಿ ಶಿಕ್ಷಕರು ಸಹಾಯ ಮಾಡಬೇಕು) ವರ್ಗೀಕರಣಕ್ಕೆ ಸಂಬಂಧಿಸಿದ ಛಾರ್ಟ್‌ಗಳನ್ನು ತೂಗುಹಾಕಿ, ವರ್ಗೀಕರಣವನ್ನು ಮಾಡಿಸಬಹುದು.

**ಬೋಧನಾ ವಿಷಯ : ಶುದ್ಧ ಆಹಾರ ಮತ್ತು ಶುದ್ಧ ನೀರು :**

**ಚಟುವಟಿಕೆ 1** : **ರೂಪಕ** : ಮನೆಯಲ್ಲಿ ಮಕ್ಕಳು ಬಂದು ನೀರು ಕುಡಿಯುವುದನ್ನು ಅಭಿನಯಿಸಿ ತೋರಿಸುವಂತೆ ಶಿಕ್ಷಕರು, ವಿದ್ಯಾರ್ಥಿಗಳಿಗೆ ಸೂಚಿಸಬೇಕು.

**ಉದಾ** : ಒಬ್ಬನು ಹೊರಗಿನಿಂದ ಬಂದು ಲೋಟವನ್ನು ಪಾತ್ರೆಯಲ್ಲಿ ಮುಳುಗಿಸಿ ನೀರನ್ನು ತುಂಬಿ ಕುಡಿದು ಹೋಗುತ್ತಾನೆ. ಲೋಟವನ್ನು ನೆಲವ ಮೇಲಿಟ್ಟು ಹೋಗುತ್ತಾನೆ. ಇನ್ನೊಬ್ಬನು ಬಂದು ಅದೇ ಲೋಟದಿಂದ ನೀರನ್ನು ತುಂಬಿ ಕುಡಿದು ಹೋಗುತ್ತಾನೆ. ಪಾತ್ರೆಯ ಬಾಯಿಯನ್ನು ಸರಿಯಾಗಿ ಮುಚ್ಚವುದಿಲ್ಲ. ಹೀಗೆ 3-4 ಜನ ಅಭಿನಯಿಸಿ ತೋರಿಸಬೇಕು.
(ರೂಪಕದಲ್ಲಿ ಅಭಿನಯಿಸುವ ವಿದ್ಯಾರ್ಥಿಗಳು ಹೇಗೆ ನಟಿಸಬೇಕೆಂದು ಶಿಕ್ಷಕರು ಮೊದಲು ತಿಳಿಸಿರಬೇಕು)

**ಚಟುವಟಿಕೆ 2** : ಕುಡಿಯುವ ನೀರನ್ನು ನಾವು ಹೇಗೆ ಕಲುಷಿತಗೊಳಿಸುತ್ತೇವೆಂದು ಚರ್ಚಿಸಿದ ನಂತರ, ಕುಡಿಯುವ ನೀರನ್ನು ಸಂಗ್ರಹಿಸಿಡುವ ವಿಧಾನಗಳನ್ನು ಚಿತ್ರಪಟದ ಮೂಲಕ ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಡುವುದು.

**ಚಟುವಟಿಕೆ 3** : ಚಿತ್ರಪಟಗಳ ಮೂಲಕ ಅಡುಗೆ ಮಾಡಿದ ಮೇಲೆ ಅವುಗಳನ್ನು ಮುಚ್ಚಿಡುವ ವಿಧಾನ, ತರಕಾರಿಗಳು ಮತ್ತು ಹಣ್ಣುಗಳನ್ನು ಒಣಗದಂತೆ ಇಡುವ ವಿಧಾನ, ಧಾನ್ಯ ಮತ್ತು ಕಾಳುಗಳನ್ನು ಸಂಗ್ರಹಿಸಿಡುವ ವಿಧಾನಗಳನ್ನು ಶಿಕ್ಷಕರು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಡಬೇಕು.

**ಬೋಧನಾ ವಿಷಯ : ನಮ್ಮ ಹಲ್ಲು**

ಇಬ್ಬರು ವಿದ್ಯಾರ್ಥಿಗಳು ಜೊತೆಯಾಗಿ ಎದುರು ಬದುರಾಗಿ ಕುಳಿತುಕೊಳ್ಳುವಂತೆ ಹೇಳಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಸೂಚಿಸಿ, ಕೆಳಗಿನ ಚಟುವಟಿಕೆಗಳಲ್ಲಿ ತೊಡಗಿಸಬೇಕು.

**ಚಟುವಟಿಕೆ 1** : ಬಾಯಿಗೆ ಒಬ್ಬನು ಕಡಲೆಕಾಯಿ ಬೀಜವನ್ನು ಹಾಕಿ ಅಗಿಯುವುದು, ಅಗಿದ ನಂತರ ಕಡಲೆ ಬೀಜಗಳು ಹೇಗಾಗಿವೆ ಎಂಬುದನ್ನು ಮತ್ತೊಬ್ಬನು ಗಮನಿಸುವುದು.

**ಚಟುವಟಿಕೆ 2** : ಒಬ್ಬನು ಬಾಯಿಯನ್ನು ತೆರೆಯಬೇಕು. ಇನ್ನೊಬ್ಬನು ಹಲ್ಲುಗಳನ್ನು ಎಣಿಸಬೇಕು, ಹಲ್ಲಿನ ಆಕಾರಗಳನ್ನು ಗಮನಿಸಬೇಕು.

ಪ್ರಶ್ನೆ : ಹಲ್ಲುಗಳಲ್ಲಿ ಎಷ್ಟು ವಿಧಗಳಿವೆ ?
ಉತ್ತರ : ಮೂರು ವಿಧಗಳಿವೆ.
ಪ್ರಶ್ನೆ : ಹಲ್ಲುಗಳ ಮೂರು ವಿಧಗಳಾವುವು ?
ಉತ್ತರ : ಬಾಚಿಹಲ್ಲು, ಕೋರೆಹಲ್ಲು, ದವಡೆಹಲ್ಲು. (ಶಿಕ್ಷಕರು ಮಕ್ಕಳು ಹೇಳದಿದ್ದರೆ ಹೇಳಬೇಕು ಯಾವ ಹಲ್ಲಿನ ಕೆಲಸ ಏನು ? ಹಾಲು ಹಲ್ಲು ಮತ್ತು ಶಾಶ್ವತ ಹಲ್ಲುಗಳ ಬಗ್ಗೆ ಶಿಕ್ಷಕರು ವಿವರಿಸಬೇಕು.

**ಬೋಧನಾ ವಿಷಯ : ವಾಯು ಮಾಲಿನ್ಯವನ್ನು ಪತ್ತೆ ಹಚ್ಚುವುದು :**

**ಚಟುವಟಿಕೆ 1** : ಸೀಮೆ ಎಣ್ಣೆ ದೀಪವನ್ನು ಉರಿಸುವುದು. ಅದರ ಮೇಲೆ ವಿದ್ಯಾರ್ಥಿಗಳು ಬಿಳಿ ಕಾಗದವನ್ನು 3-4 ಸೆಕೆಂಡುಗಳ ಕಾಲ ಹಿಡಿಯುವಂತೆ ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು. ಬಿಳಿ ಕಾಗದ ಕಪ್ಪಾಗುವುದನ್ನು ವಿದ್ಯಾರ್ಥಿಗಳು ಗಮನಿಸುವಂತೆ ಸೂಚಿಸಬೇಕು.

**ಚಟುವಟಿಕೆ 2** : ಎಣ್ಣೆ , ಗ್ಲಿಸರಿನ್ ಹಚ್ಚಿದ ಗಾಜಿನ ಪಟ್ಟಿಯನ್ನು ಪ್ರತಿ ವಿದ್ಯಾರ್ಥಿಗೆ ಕೊಟ್ಟು (ಮನೆಯವರೆಗೆ ಹೋಗಿಬರಲು) ಕಳುಹಿಸುವುದು. ಅವರು ಹಿಂತಿರುಗಿದ ನಂತರ ಅದರ ಮೇಲೆ ಏನು ಸಂಗ್ರಹವಾಗಿದೆ ಎಂಬುದನ್ನು ಪೀನ ಮಸೂರದ ಮೂಲಕ ನೋಡುವಂತೆ ತಿಳಿಸುವುದು.

**ಚಟುವಟಿಕೆ 3** : ವಿದ್ಯಾರ್ಥಿಗಳನ್ನು ಶಿಕ್ಷಕರು ರಸ್ತೆ ಬದಿಯಲ್ಲಿ ಕರೆದುಕೊಂಡು ಹೋಗುವುದು, ಅಲ್ಲಿನ ಗಿಡಮರಗಳ ಎಲೆಗಳ ಮೇಲೆ ಸಂಗ್ರಹವಾಗಿರುವ ಧೂಳನ್ನು ಗಮನಿಸುವಂತೆ ಹೇಳುವುದು.

**ಬೋಧನಾ ವಿಷಯ : ಸಸ್ಯಗಳ ವೈವಿಧ್ಯತೆ : ಸಸ್ಯಗಳಲ್ಲಿನ ಕ್ರಿಯೆಗಳು.**

**ಚಟುವಟಿಕೆ 1** : ಶಿಕ್ಷಕರು ವಿದ್ಯಾರ್ಥಿಗಳನ್ನು ಗಿಡಮರಗಳಿರುವ ಪ್ರದೇಶಕ್ಕೆ ಕರೆದುಕೊಂಡು ಹೋಗಿ, ಬೇರೆ ಬೇರೆ ಪ್ರಭೇದದ ಸಸ್ಯಗಳನ್ನು ತೋರಿಸಿ, ಅವುಗಳ ವೈಶಿಷ್ಟ್ಯ, ಅವುಗಳ ದೇಹ ರಚನೆ ಮತ್ತು ಹೋಲಿಕೆ ಬಗ್ಗೆ ವಿವರಣೆ ನೀಡುವುದು.

**ಉದಾಹರಣೆ** : ಪಾಪಾಸುಕಳ್ಳಿ, ತೆಂಗಿನ ಮರ, ಹುಣಸೆಮರ, ಹುಲ್ಲು, ತುಂಬೆ ಇತ್ಯಾದಿ.

**ಚಟುವಟಿಕೆ 2** : ಹುಲ್ಲನ್ನು ಬೇರು ಸಮೇತ ಕಬ್ಬಿಣದ ಹಾರೆಯಿಂದ ಮೇಲೆತ್ತುವಂತೆ ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು. ಹುಲ್ಲನ್ನು ಮೇಲೆತ್ತಿದ್ದ ಮೇಲೆ ಬೇರಿಗೆ ಮಣ್ಣು ಅಂಟಿಕೊಂಡಿರುವುದನ್ನು ಗಮನಿಸುವಂತೆ ತಿಳಿಸುವುದು.

**ಚಟುವಟಿಕೆ 3** : ಪ್ಲಾಸ್ಟಿಕ್ ಕವರನ್ನು ಗಿಡವೊಂದರ ಎಲೆಗಳಿಗೆ ಕಟ್ಟುವಂತೆ ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು. ಬೇರೆ ಬೇರೆ ವಿದ್ಯಾರ್ಥಿಗಳು ಬೇರೆ ಬೇರೆ ಗಿಡಗಳ ಎಲೆಗಳಿಗೆ ಕವರನ್ನು ಕಟ್ಟಲಿ. ಬಿಸಿಲು ಇರುವ ಸಮಯದಲ್ಲಿ ಈ ಚಟುವಟಿಕೆಯನ್ನು ಮಾಡಿಸಬೇಕು. 15 ನಿಮಿಷಗಳ ನಂತರ ಪ್ಲಾಸ್ಟಿಕ್ ಕವರಲ್ಲಿ ಸಂಗ್ರಹವಾಗಿರುವ ಹನಿಗಳನ್ನು ಗಮನಿಸಲು ತಿಳಿಸುವುದು.

**ಚಟುವಟಿಕೆ 4** : ದ್ಯುತಿ ಸಂಶ್ಲೇಷಣೆಯ ಪ್ರಯೋಗ : (ಪ್ರಯೋಗದ ವಿವರ)
ಈ ಪ್ರಯೋಗದಿಂದ ಆಕ್ಸಿಜನ್ ಬಿಡುಗಡೆಯಾಗುತ್ತದೆಂದು ತೋರಿಸಬಹುದು.

**ಬೋಧನಾ ವಿಷಯ : ನಮ್ಮ ದೇಹದ ಒಳಗೆ ಏನೇನಿದೆ ?**

**ಚಟುವಟಿಕೆ 1** : ಒಬ್ಬನನ್ನು ಎಲ್ಲರೆದುರಿಗೆ ನಿಲ್ಲಿಸಿ, ಶಿಕ್ಷಕರು ವಿದ್ಯಾರ್ಥಿಗಳಿಂದ ಹೇಳಿಸಿ, ಕಪ್ಪು ಹಲಗೆ ಮೇಲೆ ಬರೆದು ಪ್ರಶ್ನಿಸುವುದು.

ಪ್ರಶ್ನೆ : ನಮ್ಮ ದೇಹದ ಒಳಗೆ ಯಾವ ಅಂಗಗಳಿವೆ ?
ಉತ್ತರ : .........
ಪ್ರಶ್ನೆ : ನಾವು ಬದುಕಲು ಏನೇನು ಬೇಕು ?
ಉತ್ತರ : ಆಹಾರ, ನೀರು, ಗಾಳಿ.
ಪ್ರಶ್ನೆ : ನಾವು ತಿಂದ ಆಹಾರ ದೇಹದಲ್ಲಿ ಏನಾಗುತ್ತದೆ ?
ಉತ್ತರ : .............

ದೇಹದಲ್ಲಿ ಆಹಾರ ಎಲ್ಲಿಗೆ ಹೋಗುತ್ತದೆ ಏನಾಗುತ್ತದೆ ? ಎಂಬುದನ್ನು ತಿಳಿಯೋಣವೆಂದು ಶಿಕ್ಷಕರು ಹೇಳಿ, ಜೀರ್ಣಾಂಗದ ಚಿತ್ರಪಟವನ್ನು ಪ್ರದರ್ಶಿಸಿ, ಭಾಗಗಳನ್ನು ಹೇಳುವುದು / ಇಲ್ಲಿ ಸ್ವಯಂ ಕಲಿಕಾ ಚಿತ್ರಪಟವನ್ನು ಬಳಸುವುದು ಉತ್ತಮ, ಚಿತ್ರಪಟ ಪ್ರದರ್ಶನದ ನಂತರ ಶಿಕ್ಷಕರು ಮಕ್ಕಳನ್ನು ಪ್ರಶ್ನಿಸುವುದು.

ಪ್ರಶ್ನೆ : ಆಹಾರ ಬಾಯಿಯಲ್ಲಿ ಏನಾಗುತ್ತದೆ ?
ಉತ್ತರ : ನುಣ್ಣಗಾಗುತ್ತದೆ.
ಪ್ರಶ್ನೆ : ಆಹಾರ ಬಾಯಿಯಿಂದ ಎಲ್ಲಿಗೆ ಹೋಗುತ್ತದೆ ?
ಉತ್ತರ : ಹೊಟ್ಟೆಗೆ, ( ಜಠರಕ್ಕೆ.)
ಪ್ರಶ್ನೆ : ಬಾಯಿಯಿಂದ ಜಠರಕ್ಕೆ ಹೋಗಲು ನೀವೇನು ಮಾಡುತ್ತೀರಿ ?
ಉತ್ತರ : ನುಂಗುತ್ತೇವೆ.

ಉಗುಳು ನುಂಗುವಂತೆ, ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಿ, ಕೈಯನ್ನು ಕತ್ತಿನ ಮೇಲಿಟ್ಟುಕೊಳ್ಳುವಂತೆ ಸೂಚಿಸುವುದು. ಹಾಗೆ ಮಾಡಿದ ಮೇಲೆ, ಆಹಾರ ಅನ್ನನಾಳದ ಮೂಲಕ ಚಲಿಸುವ ವಿಧಾನವನ್ನು ಕಂಪನ ಚಲನೆ ಎನ್ನುವರು ಎಂದು ಹೇಳಿ, ಜಠರ ಮತ್ತು ಕರುಳಿನಲ್ಲಾಗುವ ಬದಲಾವಣೆಯನ್ನು ವಿವರಿಸುವುದು. ಶಿಕ್ಷಕರು ಪ್ರಶ್ನಿಸುವುದನ್ನು ಮುಂದುವರಿಸಬೇಕು.

ಪ್ರಶ್ನೆ : ಆಹಾರ ನಮಗೆ ಏಕೆ ಬೇಕು ?
ಉತ್ತರ : ಶಕ್ತಿಗೆ.
ಪ್ರಶ್ನೆ : ಆಹಾರ ಶಕ್ತಿಯಾಗಿ ಮಾರ್ಪಡಲು ಮತ್ತೇನು ಬೇಕು ?
ಉತ್ತರ : ........... ಗಾಳಿ ಬೇಕು. ನೀರು ಬೇಕು. ಶಿಕ್ಷಕರೇ ಹೇಳುವುದು.
ಪ್ರಶ್ನೆ : ನಾವು ಗಾಳಿಯನ್ನು ಯಾವುದರ ಮೂಲಕ ತೆಗೆದುಕೊಳ್ಳುತ್ತೇವೆ ?
ಉತ್ತರ : ಮೂಗಿನ ಮೂಲಕ.
ಪ್ರಶ್ನೆ : ನಾವು ಗಾಳಿ ತೆಗೆದುಕೊಳ್ಳುವ ಕ್ರಿಯೆಗೆ ಏನೆಂದು ಕರೆಯುವರು ?
ಉತ್ತರ : ಉಸಿರಾಟ. (ಉಸಿರಾಟ ನಡೆಯುವುದನ್ನು ಖಚಿತಪಡಿಸಲು ಹಿಂದೆ ವಿವರಿಸಿರುವ ಚಟುವಟಿಕೆಗಳನ್ನು ತೋರಿಸಬಹುದು)
ಪ್ರಶ್ನೆ : ಉಸಿರಾಟದ ಅಂಗಗಳಾವುವು ?
ಉತ್ತರ : ............ ಉತ್ತರ ಬಾರದಿದ್ದಾಗ ಶಿಕ್ಷಕರು ಶ್ವಾಸಾಂಗದ ವ್ಯೂಹದ ಚಿತ್ರಪಟವನ್ನು ಪ್ರದರ್ಶಿಸಿ, ಅದರ ಭಾಗಗಳನ್ನು ಹೇಳಿಸುವುದು. / ಸ್ವಯಂ ಕಲಿಕಾ ಚಿತ್ರಪಟಗಳನ್ನು ಬಳಸುವುದು ಉತ್ತಮ.

ಶ್ವಾಸಕೋಶಗಳಲ್ಲಿ ಗಾಳಿ ತುಂಬಿ ರಕ್ತಕ್ಕೆ ಆಮ್ಲಜನಕ ಸೇರುವುದನ್ನು ಶಿಕ್ಷಕರು ವಿವರಿಸಬೇಕು. ಪ್ರಶ್ನಿಸುವುದನ್ನು ಮುಂದುವರಿಸಬೇಕು.

ಪ್ರಶ್ನೆ : ಕರುಳಿನಲ್ಲಿ ಆಹಾರ ಜೀರ್ಣವಾಗುತ್ತದೆ. ಶ್ವಾಸಕೋಶಗಳಲ್ಲಿ ಗಾಳಿ ತುಂಬಿದೆ. ಆಹಾರ ಮತ್ತು ಗಾಳಿಯನ್ನು ಎಲ್ಲಾ ಭಾಗಗಳಿಗೆ ಕೊಂಡೊಯ್ಯುವುದು ಯಾವುದು ?

ಉತ್ತರ : ರಕ್ತ.

ಪ್ರಶ್ನೆ : ರಕ್ತವನ್ನು ಪಂಪುಮಾಡುವ ಅಂಗ ಯಾವುದು ?

ಉತ್ತರ : ಹೃದಯ.

ಪ್ರಶ್ನೆ : ಹೃದಯ ನಿಮ್ಮ ದೇಹದಲ್ಲಿ ಎಲ್ಲಿದೆ ? ತೋರಿಸಿ. (ಅದರ ಜಾಗ)

ಉತ್ತರ : ವಿದ್ಯಾರ್ಥಿಗಳು ಎದೆಯನ್ನು ತೋರಿಸುವರು.

ಶಿಕ್ಷಕರು ಒಬ್ಬರ ಎದೆಯ ಮೇಲೆ ಮತ್ತೊಬ್ಬರು ಕಿವಿಯಿಟ್ಟು ಕೇಳುವಂತೆ ಸೂಚಿಸಿ, ಅವರು ಹಾಗೆ ಮಾಡಿದ ಮೇಲೆ ಚಿತ್ರಪಟವನ್ನು ಪ್ರದರ್ಶಿಸಿ, ಹೃದಯದ ಭಾಗಗಳನ್ನು ವಿದ್ಯಾರ್ಥಿಗಳಿಂದ ಹೇಳಿಸಿ , ಹೃದಯದ ಕಾರ್ಯ ವಿಧಾನವನ್ನು ವಿವರಿಸುವುದು. ಪ್ರಶ್ನಿಸುವುದನ್ನು ಮುಂದುವರಿಸುವುದು.

ಪ್ರಶ್ನೆ : ನೀವು ಮೂತ್ರ ಮಾಡುತ್ತೀರಿ. ಮೂತ್ರ ವಿಸರ್ಜನೆ ಮಾಡದಿದ್ದರೆ ಏನಾಗುತ್ತದೆ ?

ಉತ್ತರ : ತಡೆದುಕೊಳ್ಳಲಾಗುವುದಿಲ್ಲ.

ಪ್ರಶ್ನೆ : ಏಕೆ ?

ಉತ್ತರ : .............

ಪ್ರಶ್ನೆ : ಹೆಚ್ಚು ಕೆಲಸ ಮಾಡಿದಾಗ ಅಥವಾ ಬೇಸಿಗೆಯಲ್ಲಿ ಮೈಯಲ್ಲಿ ಏನು ಉತ್ಪತ್ತಿಯಾಗುತ್ತದೆ ?

ಉತ್ತರ : ಬೆವರು.

ಪ್ರಶ್ನೆ : ಬೆವರು ಏಕೆ ಉತ್ಪತ್ತಿಯಾಗಬೇಕು ?

ಉತ್ತರ : ...........

ದೇಹದಲ್ಲಿ ತ್ಯಾಜ್ಯವಸ್ತುಗಳ ಉತ್ಪತ್ತಿ ಮತ್ತು ಅವುಗಳ ವಿಸರ್ಜನೆಯ ಬಗ್ಗೆ ಮೂತ್ರಜನಕಾಂಗ ಮತ್ತು ಚರ್ಮದ ಚಿತ್ರಪಟಗಳನ್ನು ತೋರಿಸಿ, ವಿವರಿಸುವುದು.



# " ಗಣಿತದ ಆಟ "

*ಆಟಗಳ ಮೂಲಕ ಗಣಿತಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಮಕ್ಕಳಿಗೆ ಖುಷಿಯಿಂದ ಬಿಡಿಸಲು ಈ ವಿಭಾಗದಲ್ಲಿ ಅವಕಾಶ ಮಾಡಿಕೊಡಲಾಗಿದೆ.*

**ಆಟ 1 : " ಅಳತೆ "**

ಮಕ್ಕಳನ್ನು ಎರಡು ಗುಂಪುಗಳನ್ನಾಗಿ ಮಾಡುವುದು. ಪ್ರತಿ ಗುಂಪಿನಲ್ಲಿರುವವರ ಎತ್ತರಗಳನ್ನು ಸೆಂ.ಮೀ.ಗಳಲ್ಲಿ ಅಳೆಯುವಂತೆ ತಿಳಿಸುವುದು. ಅವರ ಎತ್ತರಗಳನ್ನು ಕಪ್ಪು ಹಲಗೆಯ ಮೇಲೆ ಏರಿಕೆ ಮತ್ತು ಇಳಿಕೆ ಕ್ರಮಗಳಲ್ಲಿ ಬರೆಯಲು ತಿಳಿಸುವುದು. ಮೊದಲು ಬರೆದ ಗುಂಪು ವಿಜೇತ ತಂಡವಾಗುವುದು. ನಂತರ ಒಂದು ಗುಂಪಿನ ಮಕ್ಕಳು ಎತ್ತರಗಳ ಏರಿಕೆ ಕ್ರಮದಲ್ಲಿ, ಇನ್ನೊಂದು ಗುಂಪಿನವರು ಎತ್ತರಗಳ ಇಳಿಕೆ ಕ್ರಮದಲ್ಲಿ ನಿಂತು ಅವರ ಎತ್ತರಗಳನ್ನು ಹೇಳುವಂತೆ ತಿಳಿಸುವುದು.

ಎತ್ತರ ಅಳೆಯುವ ಕ್ರಮ, ಮಾನಗಳ ಬಗ್ಗೆ , >, <, = ಇವುಗಳ ಬಗ್ಗೆ ಶಿಕ್ಷಕರು ತಿಳಿಸಬೇಕು.

**ಸಾಮಗ್ರಿಗಳು** : ಎರಡು ಬಟ್ಟೆ ಅಳೆಯುವ ಟೇಪುಗಳು.
**ಬೇಕಾಗುವ ಸಮಯ** : 15 ನಿಮಿಷಗಳು.

**ಆಟ 2 : " ನೆನಪಿನ ಚಪ್ಪಾಳೆ "**

**ಅವಿಭಾಜ್ಯ ಸಂಖ್ಯೆಗಳು** : ಒಂದು ಮತ್ತು ಅದೇ ಸಂಖ್ಯೆಯಿಂದಲ್ಲದೆ ಬೇರಾವ ಸಂಖ್ಯೆಗಳಿಂದಲೂ ಪೂರ್ಣವಾಗಿ ಭಾಗಿಸಲ್ಪಡದ ಸಂಖ್ಯೆಗಳು, **ಉದಾ** : 2, 3, 5, 7, 11, 13, 17, 19.........

ಮಕ್ಕಳ ಸಂಖ್ಯೆ 24ಕ್ಕಿಂತ ಕಡಿಮೆ ಇರುವ ಎಲ್ಲಾ ಮಕ್ಕಳನ್ನು ವೃತ್ತಾಕಾರವಾಗಿ ನಿಲ್ಲಿಸಬೇಕು. ಶಿಕ್ಷಕರನ್ನೂ ಒಳಗೊಂಡಂತೆ ಪ್ರತಿಯೊಬ್ಬರಿಗೂ ಒಂದೊಂದು ಸಂಖ್ಯೆ ಚೀಟಿಗಳನ್ನು ಕ್ರಮವಾಗಿ ಕೊಡಬೇಕು. ಶಿಕ್ಷಕ 1ನ್ನು ಇಟ್ಟುಕೊಂಡಿರಬೇಕು. ಇದಾದ ನಂತರ ಸಂಖ್ಯೆ 3 ರಿಂದ ಪ್ರತಿ 3ನೇ ಸಂಖ್ಯೆ ಇರುವವರನ್ನು ಕೂಡಿಸಬೇಕು. ನಂತರ 1ನೇ

ಸಂಖ್ಯೆಯುಳ್ಳ ಶಿಕ್ಷಕ ಕೂಡಬೇಕು. ಈಗ ನಿಂತಿರುವ ಮಕ್ಕಳ ಸಂಖ್ಯೆಗಳು ಅವಿಭಾಜ್ಯ ಸಂಖ್ಯೆಗಳಾಗಿರುತ್ತವೆ.

| | | | | | | | | | | | |
|---|---|---|---|---|---|---|---|---|---|---|---|
| [1] | 2 | 3 | 4 | 5 | (6) | 7 | 8 | (9) | 10 | 11 | (12) |
| 13 | 14 | (15) | 16 | 17 | (18) | 19 | 20 | (21) | 22 | 23 | (24) |

ಇದಾದ ನಂತರ ಶಿಕ್ಷಕರು 1 ರಿಂದ 24ರ ಸಂಖ್ಯೆಗಳನ್ನು ಜೋರಾಗಿ ಎಣಿಸಬೇಕು. ಆದರೆ ಅವಿಭಾಜ್ಯ ಸಂಖ್ಯೆಗಳನ್ನು ಹೇಳದೆ ಬದಲಾಗಿ ಚಪ್ಪಾಳೆ ತಟ್ಟಬೇಕು. ನಂತರ ಇದೇ ರೀತಿ ಎಲ್ಲಾ ಮಕ್ಕಳೂ ನೆನಪಿನ ಚಪ್ಪಾಳೆ ತಟ್ಟಬೇಕು.

**ಸಾಮಗ್ರಿಗಳು** : 1 ರಿಂದ 24 ಸಂಖ್ಯೆಗಳುಳ್ಳ ಚೀಟಿಗಳು.

**ಬೇಕಾಗುವ ಸಮಯ** : 20 ನಿಮಿಷಗಳು.

***ಸೂಚನೆ:*** (1) ಮಕ್ಕಳ ಸಂಖ್ಯೆ 25 ಮತ್ತು ಮೇಲ್ಪಟ್ಟು ಇದ್ದಾಗ 5 ರಿಂದ ಪ್ರತಿ 5ನೇ ಯವರನ್ನು ಕೂಡಿಸುತ್ತಾ ಹೋಗಬೇಕು.

(2) 49 ಸಂಖ್ಯೆಯ ಮಕ್ಕಳು ಗುಂಪಿನಲ್ಲಿದ್ದಾಗ 7ನೇ ಸಂಖ್ಯೆಯಿಂದ ಪ್ರತಿ 7ನೇ ಯವರನ್ನು ಕೂಡಿಸುತ್ತಾ ಹೋಗಬೇಕು.

(3) ಹೀಗೆಯೇ ಪ್ರತಿ ಅವಿಭಾಜ್ಯ ಸಂಖ್ಯೆಗಳಿಂದ ಮಾಡಬೇಕು.

**ಆಟ 3 : " ಸರಿ ಉತ್ತರ ಹೇಳಿ ಸಿಹಿ ತಿನ್ನಿ "**

I. ಒಂದು ಬಿಸ್ಕತ್ತಿನ ಬೆಲೆ 10 ಪೈಸೆಗಳು
ಒಂದು ಚಾಕೋಲೇಟ್ ಬೆಲೆ 15 ಪೈಸೆಗಳು
ಒಂದು ಕಿತ್ತಲೆ ಹಣ್ಣಿನ ಬೆಲೆ 50 ಪೈಸೆಗಳು. ಆದರೆ ಕೆಳಗಿನಂತಹ ಪ್ರಶ್ನೆಗಳನ್ನು ಕೇಳಿ ಸರಿ ಉತ್ತರ ಹೇಳಿದವರಿಗೆ ಒಂದು ಚಾಕೋಲೇಟ್ ಕೊಡುವುದು.

1) 1 ಬಿಸ್ಕತ್ತು 1 ಚಾಕೋಲೇಟ್ ಬೆಲೆ ಎಷ್ಟು? (25 ಪೈ)
2) 1 ಬಿಸ್ಕತ್ತು, 2 ಚಾಕೋಲೇಟ್, 1 ಕಿತ್ತಲೆ ಬೆಲೆಯೇನು ? (90 ಪೈ)
3) 3 ಬಿಸ್ಕತ್ತು, 1 ಕಿತ್ತಲೆ ಬೆಲೆ ಎಷ್ಟು? (80 ಪೈ)

ಹೀಗೆ ಪ್ರಶ್ನಾವಳಿಗಳನ್ನು ಮೊದಲೇ ತಯಾರಿಸಿಕೊಳ್ಳುವುದು.
ಬೆಲೆಗಳನ್ನು ಕಪ್ಪು ಹಲಗೆಯ ಮೇಲೆ ಬರೆದರೆ ಉತ್ತಮ.

ಶಿಕ್ಷಕರು ಮಕ್ಕಳಿಗೆ ಸ್ಥಳೀಯವಾಗಿ ಲಭ್ಯವಾಗುವ ಸಿಹಿ ತಿನಿಸುಗಳ ಬೆಲೆಗಳನ್ನು ಹೇಳುವುದು ಉತ್ತಮ.

II. ಬೇರೆ ಬೇರೆ ಬೆಲೆಯ ಹಲವಾರು ಚಿಲ್ಲರೆ ನಾಣ್ಯಗಳನ್ನು ಮತ್ತು 1, 2, 5 ಮತ್ತು 10ರ ರೂಗಳ ನೋಟುಗಳಲ್ಲಿ ಕೆಲವನ್ನು ಮಗುವಿಗೆ ಕೊಡಬೇಕು. ಅವುಗಳ ಒಟ್ಟು ಮೊತ್ತ ಕೇಳಬೇಕು. ಸರಿ ಉತ್ತರ ಹೇಳಿದವನಿಗೆ ಸಿಹಿಕೊಟ್ಟು ಕಳುಹಿಸಬೇಕು ಮಕ್ಕಳ ಮಟ್ಟಕ್ಕೆ ಅನುಗುಣವಾಗಿ ಶಿಕ್ಷಕ ಪ್ರಶ್ನೆಗಳನ್ನು ಕೇಳಬೇಕು. ಕೊನೆಯಲ್ಲಿ ಎಲ್ಲರಿಗೂ ಸಿಹಿ ಸಿಗುವಂತಾಗಲಿ.

**ಸಾಮಗ್ರಿಗಳು** : ಚಾಕಲೇಟುಗಳು, ಚಿಲ್ಲರೆ ನಾಣ್ಯಗಳು ಮತ್ತು ನೋಟುಗಳು.

**ಬೇಕಾದ ಸಮಯ** : 20 ನಿಮಿಷಗಳು.

**ಆಟ 4 : '' ಚೌಕ ಬಾರ ''**

ಮಕ್ಕಳನ್ನು 5 ರಂತೆ ಗುಂಪು ಮಾಡುವುದು. ಪ್ರತಿ ಗುಂಪಿಗೆ ಹುಣಿಸೆ ಬೀಜದಿಂದ ಮಾಡಿದ ಚೌಕ ಬಾರ 4 ಕೊಡುವುದು. ಗುಂಪಿನಲ್ಲಿರುವ ಮೊದಲನೆಯವನು ಚೌಕ ಬಾರಗಳನ್ನು ಅಲ್ಲಾಡಿಸಿ ಹಾಕುವುದು. ಅವನಿಗೆ ಲಭಿಸಿದ ಅಂಕಗಳನ್ನು ಒಂದೆಡೆ ಬರೆದುಕೊಳ್ಳಬೇಕು, ನಂತರ ಎರಡನೆಯವನು, ತದನಂತರ ಮೂರನೆಯವನು ಹೀಗೆ ಎಲ್ಲರೂ ತಮ್ಮ ತಮ್ಮ ಅಂಕಗಳನ್ನು ಬೇರೆ ಬೇರೆಯಾಗಿ ಬರೆದುಕೊಳ್ಳುವುದು. ಹೀಗೆ 5-6 ಬಾರಿ ಆಟ ಆಡಿ ತಮಗೆ ಬಂದ ಒಟ್ಟು ಅಂಕಗಳನ್ನು ಸ್ಥಾನ ಬೆಲೆಗಳಿಗೆ ಅನುಗುಣವಾಗಿ ಬರೆದು ಓದುವುದು. ಕೊನೆಯಲ್ಲಿ ಇಡೀ ತಂಡದವರು ಗಳಿಸಿದ ಒಟ್ಟು ಅಂಕಗಳ ಮೊತ್ತವನ್ನು ಕೂಡಿ ಸ್ಥಾನ ಬೆಲೆಗೆ ಅನುಗುಣವಾಗಿ ಓದಬೇಕು. ಯಾವ ಗುಂಪಿಗೆ ಹೆಚ್ಚು ಅಂಕಗಳು ಬಂದಿರುವುದೋ ಆ ಗುಂಪು ಉತ್ತಮ.

**ಅಂಕ ನೀಡುವ ರೀತಿ :** ಬೀಜವನ್ನು ಹೊಡೆದಾಗ 2 ಭಾಗಗಳಾಗಿ ಬೇರೆಯಾಗುತ್ತದೆ ಒಂದು ಕಪ್ಪು ಮತ್ತೊಂದು ಮುಖ ಬಿಳಿಯಾಗಿರುತ್ತದೆ. ಅಲ್ಲಾಡಿಸಿ ಹಾಕಿದಾಗ 1 ಬಿಳಿಮುಖ ಮೇಲೆ ಬಿದ್ದರೆ 1 ಅಂಕ, 2 ಬಿಳಿಮುಖಗಳು ಮೇಲೆ ಬಿದ್ದರೆ 2 ಅಂಕಗಳು, 3 ಬಿಳಿ ಮುಖಗಳು ಮೇಲೆ ಬಿದ್ದರೆ 3 ಅಂಕಗಳು, 4 ಅಂಕಗಳು ಮೇಲೆ ಬಿದ್ದರೆ '' ಚೌಕ '' 4 ಅಂಕಗಳು, ಚೌಕ ಬಿದ್ದಾಗ ಅವನು ಮತ್ತೊಮ್ಮೆ ಆಡುವ ಅವಕಾಶ ಪಡೆಯುತ್ತಾನೆ. ಯಾವ ಮುಖವೂ ಬಿಳಿಯಾಗಿರದೆ ಇದ್ದರೆ '' ಬಾರ '' 8 ಅಂಕಗಳು, ಬಾರ ಬಿದ್ದಾಗಲೂ ಸಹ ಅವನು ಮತ್ತೊಮ್ಮೆ ಆಡುವ ಅವಕಾಶ ಪಡೆಯುತ್ತಾನೆ.

ಬೇಕಾದ ಸಮಯ : 20 ನಿಮಿಷಗಳು.

ಸಾಮಗ್ರಿಗಳು : ಹುಣಿಸೆ ಬೀಜದಿಂದ ಮಾಡಿದ 4 ಹೋಳುಗಳು. ಇಂತಹವುಗಳು ಎಲ್ಲಾ ಗುಂಪಿಗೂ 5 x 4 = 20 ಹೋಳುಗಳು ಬೇಕು.

**ಆಟ 5 : " ಸರಿ ಬೆಸ "**

ಮಕ್ಕಳನ್ನು 5 ರಂತೆ ಗುಂಪು ಮಾಡುವುದು. ಪ್ರತಿ ಗುಂಪಿಗೂ ಸ್ವಲ್ಪ ಹುಣಿಸೇ ಬೀಜಗಳನ್ನು ಕೊಡುವುದು. ಗುಂಪಿನಲ್ಲಿ ಮೊದಲನೆಯವನು ಹುಣಿಸೆ ಬೀಜಗಳನ್ನು ತನ್ನ ಬೊಗಸೆಯಲ್ಲಿ ಸ್ವಲ್ಪ ತೆಗೆದುಕೊಂಡು ಅಲ್ಲಾಡಿಸುತ್ತಾ ಅದರಿಂದ ಸ್ವಲ್ಪ ಬೀಜಗಳನ್ನು ತನ್ನ ಬಲಗೈ ಮುಷ್ಟಿಯಲ್ಲಿ ಹಿಡಿದು ತಂಡದಲ್ಲಿರುವ ಎರಡನೆಯವನನ್ನು " ಸರಿ, ಬೆಸ " ಎಂದು ಕೇಳುವನು, ಎರಡನೆಯವನು ಊಹಿಸಿ ' ಸರಿ ' ಅಥವಾ ' ಬೆಸ ' ಅಥವಾ ' ಬುಗ್ಗ ' ಎಂದು ಹೇಳುವನು. ಅವನ ಊಹೆ ಸರಿಯಾದ ಉತ್ತರವಾಗಿದ್ದರೆ ಒಂದು ಅಂಕ ಎರಡನೆಯವನಿಗೆ ಲಭಿಸುತ್ತದೆ. ' ಸರಿ' ಅಂದರೆ ಸಮ ಸಂಖ್ಯೆಗಳಿರುವುದು, ' ಬೆಸ ' ಎಂದರೆ ಬೆಸ ಸಂಖ್ಯೆಯ ಬೀಜಗಳಿರುವುದು, ' ಬುಗ್ಗ ' ಎಂದರೆ ಖಾಲಿ, ಬೀಜಗಳಿರುವುದಿಲ್ಲ. ಮೊದಲನೆಯವನು ಬೀಜ ಹಿಡಿದ ತಂಡದಲ್ಲಿರುವವರಿಗೆಲ್ಲರಿಗೂ ಒಂದೊಂದು ಬಾರಿ ಕೇಳುತ್ತಾನೆ. ಅವರು ' ಸರಿ ಬೆಸ ' ಹೇಳಿ ಉತ್ತರ ಸರಿಯಾಗಿದ್ದರೆ 1 ಅಂಕ ತಪ್ಪಾಗಿದ್ದರೆ 0 ಅಂಕ ಪಡೆಯುವರು. ನಂತರ ಎರಡನೆಯವನು ಬೀಜ ಹಿಡಿಯ ಬೇಕು. ಇವನೂ ಸಹ ಎಲ್ಲರನ್ನು ಒಂದೊಂದು ಬಾರಿ ಬೀಜಹಿಡಿದು ' ಸರಿ ಬೆಸ ' ಕೇಳುವನು. ಉತ್ತರಿಸಿದ ಎಲ್ಲರೂ ತಮ್ಮ ತಮ್ಮ ಅಂಕಗಳನ್ನು ಪಡೆದು ಮೊದಲಿನ ಅಂಕಗಳಿಗೆ ಸೇರಿಸುವರು. ಹೀಗೆಯೇ ತಂಡದಲ್ಲಿರುವವರೆಲ್ಲರೂ ಆಟ ಆಡಿದ ಮೇಲೆ, ಹೆಚ್ಚು ಅಂಕಗಳನ್ನು ಪಡೆದವರು ಉತ್ತಮ. ಕೊನೆಗೆ ಒಂದು ತಂಡದಲ್ಲಿ ಎಲ್ಲರ ಅಂಕಗಳನ್ನು ಕೂಡಿದಾಗ ಯಾವ ತಂಡದ ಅಂಕಗಳು ಹೆಚ್ಚಾಗಿರುವುದೋ ಅದು ಉತ್ತಮ ತಂಡವಾಗುತ್ತದೆ. ಅಂಕಗಳನ್ನು ತಿಳಿಸುವಾಗ ಸಂಖ್ಯೆಯನ್ನು ಅದು ' ಸರಿ ' ಅಥವಾ ' ಬೆಸ ' ಸಂಖ್ಯೆ ಎಂದು ತಿಳಿಸಬೇಕು. ಹೀಗೆ 4 ಬಾರಿ ಆಟ ಆಡಿಸುವುದು.

ಸಾಮಗ್ರಿಗಳು : ಎಲ್ಲರಿಗೂ ಬೇಕಾಗುವಷ್ಟು ಹುಣಿಸೆ ಬೀಜಗಳು.

ಬೇಕಾಗುವ ಸಮಯ : 15 ನಿಮಿಷಗಳು.

**ಆಟ 6 : " 27 ಮತ್ತು 30 "**

ಮಕ್ಕಳನ್ನು 5ರ ಗುಂಪಿನಲ್ಲಿ ಮಾಡುವುದು. ಪ್ರತಿಯೊಂದು ಗುಂಪಿಗೂ ಚಿತ್ರದಲ್ಲಿ ಕಾಣುವಂತೆ ಚೌಕಗಳುಳ್ಳ ದೊಡ್ಡ 12" x 12" ಅಳತೆಯುಳ್ಳ 3 x 3 = 9 ಚೌಕಗಳುಳ್ಳ ರೊಟ್ಟನ್ನು ಕೊಡುವುದು. 1 ರಿಂದ 18 ಸಂಖ್ಯೆಗಳಿರುವ 4" x 4" ಅಳತೆಯ ಸಂಖ್ಯಾ ಚೀಟಿಯುಳ್ಳ ಕವರನ್ನು ಕೊಡಬೇಕು.

ಒಂದು ಗುಂಪಿನಲ್ಲಿರುವವರೆಲ್ಲರೂ ಸೇರಿ 1 ರಿಂದ 18 ಸಂಖ್ಯೆಗಳ ಚೀಟಿಗಳನ್ನು ಸರಿ ಸಂಖ್ಯೆಗಳಾಗಿ ಮತ್ತು ಬೆಸ ಸಂಖ್ಯೆಗಳಾಗಿ ವಿಂಗಡಿಸುವಂತೆ ತಿಳಿಸಬೇಕು. 2, 4, 6, 8 10, 12, 14, 16, 18 ಸರಿ ಸಂಖ್ಯೆಗಳಿರುವ ಚೀಟಿಗಳನ್ನು ಚೌಕಾಕಾರದ ಮನೆಗಳಲ್ಲಿ ಚಿತ್ರದಲ್ಲಿ ಕಾಣುವ ಕರ್ಣಗಳಲ್ಲಿಯ ಸಂಖ್ಯೆಗಳ ಮೊತ್ತ 30 ಆಗುವಂತೆ ಜೋಡಿಸಬೇಕು. ಯಾವ ತಂಡ ಬೇಗನೆ ಜೋಡಿಸುವದೋ ಅವರು ಉತ್ತಮ ತಂಡವಾಗುವುದು.



ಇದೇ ರೀತಿ 1, 3, 5, 7, 9, 11, 13, 15, 17, ಬೆಸ ಸಂಖ್ಯೆಗಳನ್ನು ಚಿತ್ರದಲ್ಲಿ ಕಾಣುವ ಕರ್ಣಗಳ ದಿಕ್ಕಿನಲ್ಲಿ ಸಂಖ್ಯೆಗಳ ಮೊತ್ತ 27 ಆಗುವಂತೆ ಜೋಡಿಸಲು ತಿಳಿಸುವುದು. ಬೇಗನೆ ಜೋಡಿಸಿದ ತಂಡದವರು ಉತ್ತಮ ತಂಡ. ಪ್ರತಿ ಬಾರಿಯೂ ಮಾಡಿದ ಸರಿ ಪ್ರಯತ್ನಗಳನ್ನು ಬರೆದುಕೊಂಡು ಒಂದು ತೀರ್ಮಾನಕ್ಕೆ ಬರಲು ತಿಳಿಸುವುದು.

**ತೀರ್ಮಾನ :** 9ರ ಚೌಕ ಅಥವಾ 14ರ ಚೌಕ ಅಥವಾ ವರ್ಗ ಸಂಖ್ಯೆ ಚೌಕಗಳಲ್ಲಿ ಅನುಕ್ರಮವಾಗಿ ಸಂಖ್ಯೆಗಳನ್ನು ಬರೆದರೆ ಚಿತ್ರದಲ್ಲಿ ಕಾಣುವ ಕರ್ಣಗಳ ನೇರದಲ್ಲಿರುವ ಸಂಖ್ಯೆಗಳ ಮೊತ್ತ ಸಮನಾಗಿರುತ್ತದೆ. ಮಕ್ಕಳು ತೀರ್ಮಾನಕ್ಕೆ ಬಾರದೇ ಇದ್ದರೂ ಪರವಾಗಿಲ್ಲ.

**ಸಾಮಗ್ರಿಗಳು** : 12" x 12" ಅಳತೆಯ 3 x 3 = 9 ಚೌಕಗಳುಳ್ಳ ದೊಡ್ಡ ಚೌಕಗಳು 5, 1 ರಿಂದ 18 ಸಂಖ್ಯೆಗಳಿರುವ ಚೀಟಿ ಉಳ್ಳ 5

ಕವರ್‌ಗಳು. ಇವುಗಳನ್ನು ಮೊದಲೇ ಸಿದ್ಧಪಡಿಸಿರ ಬೇಕು.

ಬೇಕಾದ ಸಮಯ : 30 ನಿಮಿಷಗಳು.

**ಆಟ 7 : " ಸಂಖ್ಯೆ ಯಾವುದು ? "**

ಪ್ರತಿ ಗುಂಪಿನಲ್ಲಿ 4 ಜನರಿರುವಂತೆ ಮಕ್ಕಳನ್ನು ಬೇರೆ ಬೇರೆ ಗುಂಪುಗಳನ್ನು ಮಾಡುವುದು. ಪ್ರತಿ ಗುಂಪಿಗೆ ಒಂದು ಲಕೋಟೆ ಕೊಡುವುದು. ಇದರಲ್ಲಿ 0, 1, 2, 3 ಸಂಖ್ಯೆಗಳುಳ್ಳ ಚಿಕ್ಕ ಚೀಟಿ 4 ಸೆಟ್ ( 4 x 4 = 16 ) ಇರುವಂತೆ, ಇದರೊಂದಿಗೆ 4 x 4 = 16 ಚಿಕ್ಕ ಚೌಕಗಳಿರುವ ಕಾರ್ಡು ಇರುತ್ತದೆ, ಸಂಖ್ಯೆಗಳನ್ನು ಆರಿಸಿಕೊಂಡು ಪ್ರತಿ ಅಡ್ಡ ಸಾಲು ಮತ್ತು ಪ್ರತಿ ಲಂಬಸಾಲುಗಳ ಸಂಖ್ಯೆಗಳ ಮೊತ್ತ ಸಮನಾಗಿರುವಂತೆ ಜೋಡಿಸಬೇಕು. ಆ ಸಂಖ್ಯೆ ಯಾವುದು ? ( ಉತ್ತರ 6) ಒಂದು ವೇಳೆ ಮೊತ್ತ ಸಮನಾಗಿ ಜೋಡಿಸಲು ಸಾಧ್ಯವಾಗದಿದ್ದರೆ ಉತ್ತರ 6 ಬರುತ್ತದೆ ಎಂದು ಸಹಾಯ ಮಾಡಬೇಕು.

| | | | |
|---|---|---|---|
| | | | |
| | | | |
| | | | |
| | | | |

**ಸಾಮಗ್ರಿಗಳು :**

4 x 4 = 16 ಚಿಕ್ಕ ಚೌಕಗಳಿರುವ ಕಾರ್ಡುಗಳು 6 .
0, 1, 2, 3 ಚಿಕ್ಕ ಅಂಕಿಗಳಿರುವ ಚೀಟಿಗಳು
16x6=96 ಕವರ್‌ಗಳು - 6 .

ಬೇಕಾಗುವ ಸಮಯ: 30 ನಿಮಿಷಗಳು.

**ಆಟ 8 : " ವಿಸ್ತೀರ್ಣ "**

I. ಮಕ್ಕಳನ್ನು ಬಯಲಿಗೆ ಕರೆದು ವೃತ್ತಾಕಾರವಾಗಿ ನಿಲ್ಲುವಂತೆ ತಿಳಿಸುವುದು. ನಂತರ ಅವರನ್ನು ಆಯತಾಕಾರದಲ್ಲಿ ನಿಲ್ಲುವಂತೆ ತಿಳಿಸಬೇಕು. ಆಯತಾಕಾರಕ್ಕೆ ನಿಲ್ಲಬೇಕಾದರೆ ಮಕ್ಕಳ ಸಂಖ್ಯೆ ಸರಿ ಸಂಖ್ಯೆಯಾಗಿರಬೇಕು. ಆಯತಾಕಾರದಲ್ಲಿ ನಿಂತಾಗ ಅವರು ನಿಂತಿರುವಲ್ಲಿ ಗೆರೆ ಎಳೆದು ಆಯತ ರಚಿಸಬೇಕು. ಅಭಿಮುಖ ಬಾಹುಗಳಲ್ಲಿ ನಿಂತಿರುವ ಎದುರು ಮಕ್ಕಳುಗಳು ನೇರ ಗೆರೆಗಳನ್ನು ಎಳೆಯಬೇಕು. ಹೀಗೆ ಗೆರೆಗಳನ್ನು ಎಳೆದ

| | | | | |
|---|---|---|---|---|
| | | | | |
| | | | | |
| | | | | |
| | | | | |

ನಂತರ ಬರುವ ಚಿಕ್ಕ ಚೌಕಗಳ ಸಂಖ್ಯೆ ಎಣಿಸಬೇಕು. ಅದು ಅವರು ನಿಂತಿರುವ ಆಯತದ ವಿಸ್ತೀರ್ಣವಾಗಿರುವುದು.

**ಆಯತದ ವಿಸ್ತೀರ್ಣ = ಉದ್ದ X ಅಗಲ. ಎಂದು ತಿಳಿಯುವರು.**

ಹೀಗೆಯೆ ಮಕ್ಕಳನ್ನು ಮತ್ತೊಮ್ಮೆ ಬೇರೆ ಬೇರೆ ಉದ್ದ, ಅಗಲಗಳಲ್ಲಿ ನಿಲ್ಲಿಸಿ ವಿಸ್ತೀರ್ಣ ಕಂಡು ಹಿಡಿಯುವುದು.

II. ಮಕ್ಕಳನ್ನು ಚೌಕಾಕಾರದಲ್ಲಿ ನಿಲ್ಲುವಂತೆ ತಿಳಿಸಬೇಕು. ಚೌಕದ ಎಲ್ಲಾ ಬಾಹುಗಳೂ ಸಮ. ಗುಂಪಿನಲ್ಲಿ 8 ಜನ, 12 ಜನ, 16 ಜನ, 20 ಜನರಂತಿದ್ದರೆ ಚೌಕಾಕಾರದಲ್ಲಿ ನಿಲ್ಲಬಹುದು. ಉಳಿದ ಮಕ್ಕಳು ಹೊರಗೆ ಉಳಿದು ವೀಕ್ಷಕರಾಗಿರಲಿ, ಮತ್ತು ಹಿಂದಿನಂತೆ ಗೆರೆಗಳನ್ನು ಎಳೆದು ವಿಸ್ತೀರ್ಣ ಕಂಡು ಹಿಡಿಯುವುದು.

**ಚೌಕದ ವಿಸ್ತೀರ್ಣ = ಬಾಹು X ಬಾಹು. ಎಂದು ತಿಳಿಯುವರು.**
ಹೀಗೆಯೇ ತ್ರಿಭುಜದ, ವೃತ್ತದ ವಿಸ್ತೀರ್ಣ ಕಂಡುಹಿಡಿದುಬಹುದು.

**ಬೇಕಾದ ಸಮಯ** : 30 ನಿಮಿಷಗಳು.

**ಆಟ 9 : " ಒಗಟು "**

" ಒಂದು ಹಣ್ಣು, ಹಣ್ಣಿನಲ್ಲಿ ಹನ್ನೆರಡು ತೊಳೆಗಳು,
ಒಂದು ತೊಳೆಯಲ್ಲಿ 30 ಬೀಜಗಳು, ಅದರಲ್ಲಿ ಒಂದು
ಬೀಜ ಕಪ್ಪು, ಒಂದು ಬಿಳುಪು "
ಹಾಗಾದರೆ ಆ ಹಣ್ಣು ಯಾವುದು ? ತಿಳಿಸಿರಿ.

(ಉತ್ತರ : 1 ಹಣ್ಣು = 1 ವರ್ಷ
12 ತೊಳೆ = 12 ತಿಂಗಳುಗಳು
30 ಬೀಜ = 30 ದಿನಗಳು
1 ಕಪ್ಪು 1 ಬಿಳುಪು = 1 ಅಮಾವಾಸ್ಯೆ, 1 ಹುಣ್ಣಿಮೆ.)

**ಆಟ 10 : " 1998ರ ವಾರ್ಷಿಕ ಕ್ಯಾಲೆಂಡರ್ ರಚನೆ "**

ಒಂದು ತಿಂಗಳು = 30 ದಿನಗಳು

ಒಂದು ವರ್ಷ = 365 1/4 ದಿನಗಳು

ನಮ್ಮ ಎಡಗೈಯನ್ನು ಹಿಡಿಯಾಗಿ ಹಿಡಿದಾಗ ಬೆರಳುಗಳ ಗೆಣ್ಣುಗಳ ಉಬ್ಬು ಮತ್ತು ಅವುಗಳ ನಡುವಿನಲ್ಲಿ ತಗ್ಗುಗಳು ಮಾರ್ಪಡುತ್ತವೆ. ಇವುಗಳ ಸಹಾಯದಿಂದ ತಿಂಗಳುಗಳಲ್ಲಿರುವ ದಿನಗಳನ್ನು ಗುರುತಿಸಬಹುದು.

| | | |
|---|---|---|
| ತೋರುಬೆರಳು ಉಬ್ಬು | ಜನವರಿ | - 31 ದಿನ |
| ತೋರು - ಮಧ್ಯದ ಬೆರಗಳುಗಳ ನಡುವಿನ ತಗ್ಗು | ಪೆಬ್ರವರಿ | - 28 ದಿನ |
| ಮಧ್ಯದ ಬೆರಳಿನ ಉಬ್ಬು | ಮಾರ್ಚ್ | - 31 ದಿನ |
| ಮಧ್ಯದ - ಉಂಗುರ ಬೆರಳುಗಳ ನಡುವಿನ ತಗ್ಗು | ಏಪ್ರಿಲ್ | - 30 ದಿನ |
| ಉಂಗುರದ ಬೆರಳಿನ ಉಬ್ಬು | ಮೇ | - 31 ದಿನ |
| ಉಂಗುರ - ಕಿರುಬೆರಳುಗಳ ನಡುವಿನ ತಗ್ಗು | ಜೂನ್ | - 30 ದಿನ |
| ಕಿರುಬೆರಳು ಉಬ್ಬು | ಜುಲೈ | - 31 ದಿನ |
| ತೋರುಬೆರಳು ಉಬ್ಬು | ಆಗಸ್ಟ್ | - 31 ದಿನ |
| ತೋರು - ಮಧ್ಯದ ಬೆರಳುಗಳ ನಡುವಿನ ತಗ್ಗು | ಸೆಪ್ಟೆಂಬರ್ | - 30 ದಿನ |
| ಮಧ್ಯದ ಬೆರಳು ಉಬ್ಬು | ಅಕ್ಟೋಬರ್ | - 31 ದಿನ |
| ಮಧ್ಯದ - ಉಂಗುರ ಬೆರಳುಗಳ ನಡುವಿನ ತಗ್ಗು | ನವೆಂಬರ್ | - 30 ದಿನ |
| ಉಂಗುರ ಬೆರಳು ಉಬ್ಬು | ಡಿಸೆಂಬರ್ | - 31 ದಿನ |
| | **ಒಟ್ಟು ದಿನಗಳು** | **- 365ದಿನಗಳು** |

365¼ ದಿನಗಳಲ್ಲಿ ಉಳಿದ ¼ ದಿನವನ್ನು ಪ್ರತಿ 4 ವರ್ಷಗಳಿಗೆ ಒಮ್ಮೆ ಪೆಬ್ರವರಿಯಲ್ಲಿ 1 ದಿನ ಸೇರಿಸಿ 29 ದಿನಗಳನ್ನು ಲೆಕ್ಕಿಸುತ್ತಾರೆ. ಆಗ ಆ ವರ್ಷವನ್ನು ಅಧಿಕ ವರ್ಷ ಎನ್ನವರು.

**ಅಧಿಕ ವರ್ಷ ಕಂಡು ಹಿಡಿಯುವ ವಿಧಾನ :**

ಇಸವಿಯ ಸಂಖ್ಯೆಯನ್ನು 4 ರಿಂದ ಭಾಗಿಸಿದಾಗ ಪೂರ್ಣವಾಗಿ ಭಾಗವಾದರೆ ಅದು ಅಧಿಕ ವರ್ಷವಾಗಿರುತ್ತದೆ.

1998 ಅಧಿಕ ವರ್ಷವಲ್ಲ, ಆದುದರಿಂದ ಪೆಬ್ರವರಿ ತಿಂಗಳಲ್ಲಿ 28 ದಿನ.

```
4)1998(499
  16
   39
   36
    38
    36
     2 ಶೇಷ
```

1996 ಅಧಿಕ ವರ್ಷವಾಗಿದೆ. ಆದುದರಿಂದ ಪೆಬ್ರವರಿ ತಿಂಗಳಲ್ಲಿ 29 ದಿನ

```
4)1996(499
  16
   39
   36
    36
    36
     0 ಶೇಷ
```

ಪ್ರತಿ ಮಕ್ಕಳಿಂದ ತಿಂಗಳುಗಳ ದಿನಗಳನ್ನು ಎಣಿಸುವ ವಿಧಾನವನ್ನು ಪುನರಾವರ್ತಿಸಬೇಕು. ಅಧಿಕ ವರ್ಷ ಕಂಡುಹಿಡಿಯುವುದು ಕಷ್ಟವಾದರೆ ಪೆಬ್ರವರಿಯಲ್ಲಿ 28 ದಿನಗಳಿರುತ್ತದೆ ಎಂದು ತಿಳಿಸಿದರೆ ಸಾಕು. ನಂತರ ಕೆಳಕಂಡ ಚಟುವಟಿಕೆ ನೀಡುವುದು.

**1998ರ ಜನವರಿ 1 ರಂದು ಗುರುವಾರ ವರ್ಷದ ಕ್ಯಾಲೆಂಡರ್ ರಚಿಸಿ.**

| | ಜನವರಿ | ಪೆಬ್ರವರಿ | ಮಾರ್ಚ | ಏಪ್ರಿಲ್ |
|---|---|---|---|---|
| ಭಾ | 4 11 18 28 | 1 8 15 22 | 1 8 15 22 29 | |
| ಸೋ | 5 12 19 26 | 2 9 16 23 | 2 9 16 23 30 | |
| ಮಂ | 6 13 20 27 | 3 10 17 24 | 3 10 17 24 31 | |
| ಬು | 7 14 21 28 | 4 11 18 25 | 4 11 18 25 | |
| ಗು | 1 8 15 22 29 | 5 12 19 26 | 5 12 19 26 | |
| ಶು | 2 9 16 23 30 | 6 13 20 27 | 6 13 20 27 | |
| ಶ | 3 10 17 24 31 | 7 14 21 28 | 7 14 21 28 | |

| | ಮೇ | ಜೂನ್ | ಜುಲೈ | ಆಗಸ್ಟ್ |
|---|---|---|---|---|
| ಭಾ | | | | |
| ಸೋ | | | | |
| ಮಂ | | | | |
| ಬು | | | | |
| ಗು | | | | |
| ಶು | | | | |
| ಶ | | | | |

| | ಸೆಪ್ಟೆಂಬರ್ | ಅಕ್ಟೋಬರ್ | ನವೆಂಬರ್ | ಡಿಸೆಂಬರ್ |
|---|---|---|---|---|
| ಭಾ | | | | |
| ಸೋ | | | | |
| ಮಂ | | | | |
| ಬು | | | | |
| ಗು | | | | |
| ಶು | | | | |
| ಶ | | | | |

ಈ ರೀತಿಯ ಮನೆಯುಳ್ಳ ಖಾಲಿ ಹಾಳೆ ಪ್ರತಿಯೊಬ್ಬರಿಗೂ ಕೊಟ್ಟು ಕ್ಯಾಲೆಂಡರ್ ರಚಿಸುವಂತೆ ತಿಳಿಸಬೇಕು.

**ಬೇಕಾಗುವ ಸಮಯ :** 30 ನಿಮಿಷಗಳು.

**ಆಟ 11 : " ಕಥಾರೂಪದ ಸಮಸ್ಯೆ "**

ಮನೆಯಾಗೆ ಬರೇ ಮೂರೇಂದ್ರೆ, ಮೂರು ರೊಟ್ಟಿಗಳು ಇದ್ದವು. ಮನೆಯಾಗೆ ಅವ್ವ-ಮಗ ಇಬ್ರು, ಅಪ್ಪ-ಮಗ ಇಬ್ರು, ಗಂಡ-ಹೆಂಡ್ರು ಇಬ್ರು ಇದ್ದರು. ಅವರಿಗೆಲ್ಲ ಮೂರು ರೊಟ್ಟಿಗಳುನ್ನು ಮುರಿಯದಂಗೆ ಕೊಡಬೇಕು. ಹೇಗೆ ?

( ಉತ್ತರ : ಪ್ರತಿಯೊಬ್ಬರಿಗೂ ಒಂದೊಂದು ರೊಟ್ಟಿ ಬರುತ್ತದೆ )

**ಆಟ 12 : " ಒಗಟು "**

" ಭಾನುಹಳ್ಳಿ ಸೋಮನಗೌಡರ ಮಗಳು ಬುದ್ದಿ ಕಲಿಯಲು ಗುರು ಮಠಕ್ಕೆ ಸೇರಿ ಶುಕ (ಸುಖ) ಪಟ್ಟು ಶನಿಯಾದಳು " ಈ ಒಗಟು ಬಿಡಿಸಿ.

( **ಉತ್ತರ :** ಭಾನುವಾ, ಸೋಮವಾರ, ಮಂಗಳವಾರ, ಬುಧವಾರ, ಗುರುವಾರ, ಶುಕ್ರವಾರ, ಶನಿವಾರ ಹೀಗೆ ವಾರದ ಹೆಸರು ಇವೆ. )

**ಆಟ 13 : " ಕಥಾ ರೂಪದ ಸಮಸ್ಯೆ (ಕೂಡಿ - ಕಳೆ)**

ಇಬ್ರು ಅಣ್ಣ ತಮ್ಮ ಇದ್ರು. ಓಸ್ ಆಡು ಮಾಡಿಕೊಂಡಿದ್ರು. ಅಣ್ಣ ಕೆರೆ ಏರಿ ಮೇಲೆ ಓಸ್ ಆಡು (ಮೇಕೆ) ಹೊಡಕೊಂಡು ಹೋಗ್ತಿದ್ದ. ಹೋಗ್ಬೇಕಾದ್ರೆ ಅಣ್ಣ ಏನಂದ ಅಂದ್ರೆ " ತಮ್ಮಾ ನನ್ ಕಡಿಗೆ ಎಲ್ಡ್ ಆಡು ಹೊಡಿ ನನ್ನೋವು ಎಲ್ಡ್ ಪಾಲು ಆಕ್ತವೆ " ಅಂದ. ಆ ಮ್ಯಾಲೆ ತಮ್ಮ ಏನಂತ ಅಂದ ಅಂದ್ರೇ " ನೀನೇ ಎಲ್ಡ್ ಹೊಡಿ ನನಗೆ ಸಮ ಆಕ್ತಾವೆ ಅಂದ ". ಹಾಗಾದ್ರೆ ಅವರು ಎಷ್ಟೆಷ್ಟು ಆಡುಗಳ್ನ ಹೊಡಕೊಂಡೋಕ್ತಿದ್ರು ?

(**ಉತ್ತರ :** ಅಣ್ಣ 14, ತಮ್ಮ 10 ಆಡುಗಳನ್ನು ಹೊಡಕೊಂಡು ಹೋಗುತ್ತಿದ್ದರು. 2 ಆಡು ಕೊಟ್ಟರೆ ಅಣ್ಣನಿಗೆ 16, ತಮ್ಮನಿಗೆ 8, ಅಂದರೆ ಎರಡುಪಾಲು ಅಣ್ಣನಿಗೆ ಆಗುತ್ತಿತ್ತು. ತಮ್ಮನಿಗೆ 2 ಆಡು ಕೊಟ್ಟರೆ ಅಣ್ಣನವು 12 ತಮ್ಮನವು 12, ಆಗ ಸಮ ಆಗುತ್ತಿತ್ತು.)

**ಆಟ 14 : " ಚದುರಂಗದ ಆಟ "**

ಮಕ್ಕಳನ್ನು 4 ರಿಂದ 5 ಜನರಿರುವಂತೆ ಗುಂಪು ಮಾಡುವುದು. ಗುಂಪಿನಲ್ಲಿರುವವರೆಲ್ಲರೂ ಚಟುವಟಿಕೆಯಲ್ಲಿ ತೊಡಗಿರುವಂತೆ ನೋಡಿಕೊಳ್ಳುವುದು.

( - x ✓ • 4 ರೀತಿಗಳು )

| | | | | | | | |
|---|---|---|---|---|---|---|---|
| x | • | | ✓ | | | | - |
| • | x | ✓ | | | | - | |
| | | • | x | ✓ | - | | |
| | | x | | - | ✓ | • | |
| | ✓ | | - | | • | | x |
| ✓ | | - | • | | | x | |
| | - | | | • | x | | ✓ |
| - | | | | x | | ✓ | • |

ಚದುರಂಗ ಬೋರ್ಡಿನಲ್ಲಿ 8 x 8 = 64 ಮನೆಗಳು ಇರುತ್ತವೆ. ಒಂದು ಆನೆಯ ಚಲನೆ ಅಡ್ಡ ಸಾಲಿನಲ್ಲಿ, ಲಂಬಸಾಲಿನಲ್ಲಿ ಚಲಿಸುತ್ತದೆ. ಎರಡು ಆನೆಗಳು ಒಂದೇ ಸಾಲಿನಲ್ಲಿದ್ದಾಗ ಒಂದರಿಂದ ಇನ್ನೊಂದು ಆನೆಯನ್ನು ಹೊಡೆಯಬಹುದು. ಅಂದರೆ ಒಂದು ಅಡ್ಡ ಸಾಲಿನಲ್ಲಿ ಅಥವಾ ಲಂಬ ಸಾಲಿನಲ್ಲಿ ಒಂದೇ ಆನೆ ಇರುವಂತೆ ಒಟ್ಟು 8 ಆನೆಗಳನ್ನು 64 ಮನೆಗಳಲ್ಲಿ ಯಾವ ಗುಂಪು ಹೆಚ್ಚು ರೀತಿಯಲ್ಲಿ ಜೋಡಿಸುವುದೋ ಆ ತಂಡ ಉತ್ತಮ.

ಶಿಕ್ಷಕ ಒಂದು ಚೌಕಾಕಾರದ ಹಾಳೆಯಿಂದ 64 ಮನೆ ಬರುವಂತೆ 8 x 8 ಮಡಚುವರೀತಿಯನ್ನು, ಆನೆಯ ಚಲನೆಯ ರೀತಿಯನ್ನು ತಿಳಿಸಬೇಕು. ಒಂದೊಂದು ಕ್ರಮಕ್ಕೆ ಬೇರೆ ಬೇರೆ ರೀತಿಯಲ್ಲಿ ಗುರುತಿಸಬೇಕು.

ಬೇಕಾಗುವ ಸಮಯ : 20 ನಿಮಿಷ

## ಆಟ 15 : " ಹಕ್ಕಿ ಹಕ್ಕಿ ನೀವೆಷ್ಟು ಇದ್ದೀರಿ ? " " ಕಥಾರೂಪದ ಸಮಸ್ಯೆ "

ಒಮ್ಮೆ ಒಬ್ಬ ಹುಡುಗ ಹೊರಗಡೆ ಹೊರಟನು. ಒಂದು ಗಿಡದ ಬಳಿ ಬಂದಾಗ ಅಲ್ಲಿದ್ದ ಹಕ್ಕಿಗಳು ಪುರ್ರನೆ ಹಾರಿಹೋದವು. ಅವನಿಗೆ ಅವುಗಳನ್ನು ಎಣಿಸುವ ಆಸೆ ಆಯಿತು. ಹುಡುಗನು ಹಿಂದೆ ಇದ್ದ ಒಂದು ಹಕ್ಕಿಯನ್ನು ಕುರಿತು " ಹಕ್ಕಿ ಹಕ್ಕಿ ನೀವು ಎಷ್ಟು ಇದ್ದೀರಿ ? " ಎಂದು ಕೇಳಿದನು. ಅದಕ್ಕೆ ಆ ಹಕ್ಕಿಯು " ನಾವು, ನಮ್ಮಷ್ಟು, ನಮ್ಮರ್ಧ, ನಮ್ಮಗಿರ್ದ ( 1/4 ಭಾಗ), ನೀನೂ ಸೇರಿದರೆ ನೂರು" ಎಂದಿತು. ಹಾಗಾದರೆ ಹಕ್ಕಿಗಳ ಸಂಖ್ಯೆ ಎಷ್ಟು ಉತ್ತರಿಸಿ.




( ಉತ್ತರ : 36 + 36 + 18 + 9 + 1 = 100 )

ಈ ಆಟಗಳನ್ನು ಪ್ರಾಥಮಿಕ ಶಾಲಾ ಮಕ್ಕಳ ಮಟ್ಟಕ್ಕೆ ರಚಿಸಲಾಗಿದೆ. ಇವುಗಳಲ್ಲಿ ಮಕ್ಕಳಿಗೆ ಸಂತೋಷ ನೀಡುವ, ಸಮಯಕ್ಕೆ ಹೊಂದಾಣಿಕೆಯಾಗುವಂತೆ, ಆಟ ಆಡಿಸಬೇಕು. ಬೇಸರ ತರಿಸುವ ಆಟಗಳು ಬೇಡ. ಬೇಕಾದ ಸಾಮಗ್ರಿಗಳನ್ನು ದೊಡ್ಡ ಪ್ರಮಾಣದಲ್ಲಿ ಬೇಕಾಗುವಷ್ಟು ಮೊದಲೇ ಸಿದ್ಧಪಡಿಸಿಕೊಳ್ಳಬೇಕು. ಗ್ರಾಮೀಣ ಜಾನಪದ ಶೈಲಿಯಲ್ಲಿ ಗಣಿತ ದೈನಂದಿನ ಬದುಕಿನ ಹತ್ತಿರವಿರಲಿ.

# ಕಥೆ ಕಟ್ಟೋಣ
## (ಕಥೆಗಳು)

ಕಥೆಗಳನ್ನು ಎಲ್ಲಾ ವಯೋಮಿತಿಯವರು ಇಷ್ಟಪಡುತ್ತಾರೆ. ಎಳೆಯ ಮಕ್ಕಳು ಕಥೆಯೆಂದಾಕ್ಷಣ ಕೇಳಲು ಉತ್ಸುಕರಾಗುತ್ತಾರೆ. ಮಕ್ಕಳ ಉತ್ಸುಕತೆಯನ್ನು ಬಳಸಿಕೊಂಡು ಕಥೆಯನ್ನು ರೂಪಿಸುವ ಸೃಜನ ಶೀಲತೆ, ಮತ್ತು ಆಲೋಚನಾ ಶಕ್ತಿಯನ್ನು ಹೆಚ್ಚಿಸುವುದು ಮತ್ತು ಅವರಲ್ಲಿ ಮಾನವೀಯ ಮೌಲ್ಯಗಳನ್ನು ಬೆಳೆಸುವುದು ಈ ವಿಭಾಗದ ಸದಾಶಯ.

ಒಂದು ಚಿಕ್ಕ ಕಥೆಯನ್ನು ಶಿಕ್ಷಕರು ಹೇಳಿ ಈ ವಿಭಾಗವನ್ನು ಪ್ರಾರಂಭಿಸಬೇಕು. ಎರಡನೇ ಹಂತದಲ್ಲಿ ಮಕ್ಕಳಿಗೆ ಪರಿಚಿತವಿರುವ ಕಥೆಯನ್ನು ಅರ್ಧಕ್ಕೆ ನಿಲ್ಲಿಸಿ, ಅದನ್ನು ಮುಕ್ತಾಯಮಾಡುವಂತೆ ಶಿಕ್ಷಕರು ವಿದ್ಯಾರ್ಥಿಗಳಿಗೆ ತಿಳಿಸಬೇಕು.

**ಉದಾಹರಣೆ 1 :** ಪುಣ್ಯ ಕೋಟಿಯ ಕಥೆ (ಮಕ್ಕಳಿಗೆ ಪರಚಿತ ಯಾವುದಾದರೂ ಕಥೆ)

ಒಂದು ಊರಿನಲ್ಲಿ ಪುಣ್ಯಕೋಟಿಯೆಂಬ ಹಸುವಿತ್ತು. ಅದು ಮೇಯಲು ಪ್ರತಿದಿನ ಕಾಡಿಗೆ ಹೋಗುತ್ತಿತ್ತು. ಒಂದು ದಿನ ಕಾಡಿನಲ್ಲಿ ಪುಣ್ಯಕೋಟಿಯನ್ನು ಹುಲಿಯೊಂದು ಅಡ್ಡಹಾಕಿ, ತಿನ್ನುತ್ತೇನೆಂದು ಹೇಳಿತು. ಆಗ ಪುಣ್ಯಕೋಟಿಯು ತನ್ನ ಕರುವಿಗೆ ಹಾಲನ್ನು ಕುಡಿಸಿ ಬರುತ್ತೇನೆಂದು ಮನೆಗೆ ಬಂದಿತು.

ಪುಣ್ಯ ಕೋಟಿಯು ಮುಂದೇನು ಮಾಡಿತು?
(ಮಕ್ಕಳು ನಾ ಮುಂದು ತಾ ಮುಂದು ಎನ್ನುತ್ತಾ ಕತೆಯನ್ನು ಮುಕ್ತಾಯ ಮಾಡುವರು)

**ಉದಾಹರಣೆ 2 :** ಬೈರವನ ಕಥೆ (ಮಕ್ಕಳಿಗೆ ಅಪರಿಚಿತವಾದ ಯಾವುದಾದರೂ ಕಥೆ)

ಒಂದು ಬೇಡರ ಹಟ್ಟಿಯಿತ್ತು. ಅಲ್ಲಿ ಭೈರವ ಎಂಬ ಬೇಟೆಗಾರನಿದ್ದನು. ಅವನಿಗೆ ಇಬ್ಬರು ಹೆಣ್ಣು ಮಕ್ಕಳಿದ್ದರು. ಭೈರವ ಪ್ರತಿದಿನ ಪ್ರಾಣಿಗಳನ್ನು ಕೊಲ್ಲುತ್ತಿದನು. ಮಾಂಸವನ್ನು ಮಾರಿ ಹಣ ಸಂಪಾದಿಸುತ್ತಿದ್ದನು. ಬೇಡರ ಹಟ್ಟಿಗೆ ಒಬ್ಬ ಸನ್ಯಾಸಿ ಬಂದು ಪ್ರಾಣಿಗಳನ್ನು ಕೊಲ್ಲುವುದು ಪಾಪ ಎಂದು ಜನರಿಗೆ ತಿಳಿಸಿದನು. ಭೈರವನ ಮಕ್ಕಳು ಸನ್ಯಾಸಿಯ ಮಾತನ್ನು ಕೇಳಿದರು. ಸಂಜೆ ಭೈರವ ಮನೆಗೆ ಬಂದಾಗ ಮಕ್ಕಳು ಇನ್ನು ಮೇಲೆ ಪ್ರಾಣಿಗಳನ್ನು ಕೊಲ್ಲಬೇಡ ಎಂದು ಕೇಳಿಕೊಂಡರು. ಮಕ್ಕಳ ಒತ್ತಾಯಕ್ಕೆ ಭೈರವ ನಾಳೆಯಿಂದ ಪ್ರಾಣಿಗಳನ್ನು ಕೊಲ್ಲುವುದಿಲ್ಲವೆಂದು ಮಾತು ಕೊಟ್ಟನು.

ಭೈರವ ಮುಂದೇನು ಮಾಡಿದ ? ತನ್ನ ಮಾತಿನಂತೆ ನಡೆದುಕೊಂಡನೇ ?

(ಕಥೆಯ ಮುಂದಿನ ಭಾಗ - ಭೈರವ ಎಂದಿನಂತೆ ಮಾರನೆದಿನ ಬೆಳಗಿನ ಜಾವ ಬೇಟೆಗೆ ಹೊರಟ. ತಂದೆಯು ಬೇಟೆಗೆ ಹೊರಟಿದ್ದನ್ನು ಕಂಡ ಮಕ್ಕಳು ಅವನಿಗೆ ಗೊತ್ತಾಗದಂತೆ ಹಿಂಬಾಲಿಸಿದರು. ಭೈರವ ಪ್ರಾಣಿಗಳನ್ನು - ಪಕ್ಷಿಗಳನ್ನು ಕಾಯುತ್ತಾ ಒಂದು ಮರದ ಹಿಂದೆ ಕುಳಿತುಕೊಂಡನು. ಮಕ್ಕಳು ದೂರದಲ್ಲಿ ಓಡಾಡತೊಡಗಿದರು. ಬಿಳಿ ಬಟ್ಟೆತೊಟ್ಟಿದ್ದ ಮಕ್ಕಳನ್ನು ಹಕ್ಕಿಗಳೆಂದುಕೊಂಡು ಭೈರವ ಬಿರಬಿರನೆ ಎರಡು ಬಾಣಗಳನ್ನು ಬಿಟ್ಟನು. ಬಾಣದ ಏಟಿಗೆ ಮಕ್ಕಳು ಪ್ರಾಣ ಬಿಟ್ಟರು. ಅಂದಿನಿಂದ ಭೈರವ ಬೇಟೆಯಾಡುವುದನ್ನು ನಿಲ್ಲಿಸಿದ )

ವಿದ್ಯಾರ್ಥಿಗಳು ಕಥೆಯನ್ನು ಇಲ್ಲಿ ಕೊಟ್ಟಿರುವಂತೆಯೇ ಮುಕ್ತಾಯ ಮಾಡಬೇಕೆಂದನೂ ಇಲ್ಲ. ಅವರಿಗೆ ಹೇಗೆ ತೋಚುತ್ತದೆಯೋ ಹಾಗೆ ಮುಗಿಸಲಿ, ಇದರಿಂದ ನಾಲ್ಕಾರು ರೀತಿಯಲ್ಲಿ ಕಥೆ ಮುಂದುವರಿಯುತ್ತದೆ ಮತ್ತು ಮಕ್ಕಳ ಆಲೋಚನಾ ಶಕ್ತಿ ಹೆಚ್ಚುತ್ತದೆ. ಅವರು ಮುಕ್ತಾಯವನ್ನು ಮಾಡಿದ ಮೇಲೆ ಅಗತ್ಯವೆನಿಸಿದರೆ ಮೇಲೆ ಬರೆದಿರುವಂತೆ ಕಥೆಯನ್ನು ಶಿಕ್ಷಕರು ಮುಕ್ತಾಯ ಮಾಡಬಹುದು.

ಮುಂದಿನ ಹಂತದಲ್ಲಿ ಶಿಕ್ಷಕರು ತಮ್ಮದೇ ಆದ ಕಥೆಗಳನ್ನು ರಚಿಸಿ, ಅರ್ಧಕ್ಕೆ ಹೇಳಿ ನಿಲ್ಲಿಸಿ, ಮುಂದುವರಿಸಲು ವಿದ್ಯಾರ್ಥಿಗಳಿಗೆ ಸೂಚಿಸುವುದು.

ಉದಾ : 1. ಒಂದು ಶಾಲೆಯ ಮಕ್ಕಳು ಮತ್ತು ಶಿಕ್ಷಕರು ಅಭಯಾರಣ್ಯ ನೋಡಲೆಂದು ಬಂಡಿಪುರಕ್ಕೆ ಹೋದರು . ಸಾಯಂಕಾಲದ ವರೆಗೂ ತಿರುಗಾಡಿ, ಪ್ರಾಣಿ - ಪಕ್ಷಿಗಳನ್ನು ನೋಡಿದರು. ಕತ್ತಲಾಗುತ್ತಾ ಬಂದಾಗ ಶಿಕ್ಷಕರು ಮಕ್ಕಳನ್ನೆಲ್ಲ ಬಸ್ಸು ಹತ್ತಿಸಿದರು. ಆದರೆ ಮದು,ಮನು ಮತ್ತು ಭಾನು ಬಸ್ಸು ಹತ್ತಲಿಲ್ಲ. ಶಿಕ್ಷಕರು ಅಲ್ಲೆಲ್ಲಾ ಹುಡುಕಾಡಿದರು. ಅವರು ಸಿಗಲಿಲ್ಲ.

ಮಧು, ಮನು, ಭಾನು ಏನಾದರು ? ಅವರು ಹಿಂದಿರುಗಿದರೆ ? ಕಥೆಯನ್ನು ಮುಕ್ತಾಯಗೊಳಿಸಲು ಶಿಕ್ಷಕರು ವಿದ್ಯಾರ್ಥಿಗಳಿಗೆ ಹೇಳಿದಾಗ - ಅವರು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಮುಕ್ತಾಯ ಮಾಡುತ್ತಾರೆ.

ಇದೇ ರೀತಿಯ ಕಥೆಗಳನ್ನು ಅರ್ಧಕ್ಕೆ ನಿಲ್ಲಿಸಿ ಹೊಸ ವಿಷಯಗಳನ್ನು ಸೇರಿಸಲು ಮಕ್ಕಳಿಗೆ ಶಿಕ್ಷಕರು ಅವಕಾಶ ಮಾಡಿಕೊಡಬಹುದು.

ಉದಾ : 2 ರಾಜು- ಅವರೆ ಬಳ್ಳಿ ಕಥೆ :

ಒಂದು ಊರಿನಲ್ಲಿ ರಾಜು ಎಂಬ ಹುಡುಗನಿದ್ದ ಅವನು ಸಾಹಸಿಗ. ರಾಜುವಿಗೆ ಆಕಾಶದಲ್ಲೇನಿದೆ ಎಂದು ತಿಳಿಯುವ ಮನಸ್ಸಾಯಿತು. ಆಕಾಶಕ್ಕೆ ಹತ್ತಲು ಒಂದು ಉಪಾಯ ಮಾಡಿದ. ಮನೆಯ ಮುಂದೆ ಅವರೆ ಬೀಜಹಾಕಿದ. ಪ್ರತಿದಿನ ನೀರು ಹಾಕಿದ. ಅದು ಬೆಳೆದು ಬೆಳೆದು ಆಕಾಶಕ್ಕೇರಿತು. ಒಂದು ದಿನ ರಾಜು ಅವರೆ ಬಳ್ಳಿ ಹಿಡಿದು ಹತ್ತತೊಡಗಿದ ಮೇಲ ಮೇಲಕ್ಕೆ ಹತ್ತಿದ.



ರಾಜುವಿಗೆ ಆಕಾಶ ಸಿಕ್ಕಿತೇ ? ರಾಜು ಅಲ್ಲಿ ಕಂಡದ್ದೇನು ?

ಕಥೆಯನ್ನು ಮುಕ್ತಾಯಗೊಳಿಸಲು ಶಿಕ್ಷಕರು ಅವಕಾಶ ಮಾಡಿಕೊಡಬೇಕು. ಮಕ್ಕಳಿಗೆ ಆಕಾಶದ ಬಗ್ಗೆ ಹೆಚ್ಚು ತಿಳಿದಿಲ್ಲದ ಕಾರಣ ಅವರು ವಿವರಣೆ ನೀಡಲಾರರು. ಈ

ಅವಕಾಶವನ್ನು ಬಳಸಿಕೊಂಡು ಶಿಕ್ಷಕರು ಆಕಾಶ, ಅಂತರಿಕ್ಷ, ಸೂರ್ಯ, ಚಂದ್ರ ನಕ್ಷತ್ರಗಳು, ಹಗಲು - ರಾತ್ರಿ, ಗ್ರಹಣಗಳು- ಯಾವ ವಿಷಯವನ್ನಾದರೂ ತಿಳಿಸಬಹುದು.

**ಪದಗಳಿಂದ ಕಥೆಗಳನ್ನು ರಚಿಸುವುದು :**

ಮಕ್ಕಳಿಗೆ ಪರಿಚಯವಿರುವ ಕಥೆಗೆ ಸಂಬಂಧಿಸಿದ 5 ಪದಗಳನ್ನು ಶಿಕ್ಷಕರು ಹೇಳುವುದು ಅಥವಾ ಚೀಟಿಗಳಲ್ಲಿ ಬರೆದು ವಿದ್ಯಾರ್ಥಿಗಳಿಗೆ ಹಂಚುವುದು. ಈ ಪದಗಳನ್ನೆಲ್ಲಾ ಬಳಸಿಕೊಂಡು ಕಥೆಯನ್ನು ವಿದ್ಯಾರ್ಥಿಗಳು ಹೇಳುವಂತೆ ಶಿಕ್ಷಕರು ತಿಳಿಸಬೇಕು.

**ಉದಾಹರಣೆ 1 :** ರಾಮ ಲಕ್ಷ್ಮಣ, ಸೀತೆ, ಆಂಜನೇಯ , ರಾವಣ

**ಉದಾಹರಣೆ 2 :** ಪಾಂಡವರು, ಕೌರವರು, ಜೂಜಾಟ, ವನವಾಸ, ಯುದ್ಧ.

ಮೇಲಿನ ಪದಗಳನ್ನು ಬಳಸಿಕೊಂಡು ಮಕ್ಕಳು ಬಹಳ ಬೇಗನೇ ಕಥೆಯನ್ನು ಹೆಣೆಯುವರು. ನಂತರ ಬೇರೆ 5 ಪದಗಳನ್ನು ಕೊಟ್ಟು ವಿದ್ಯಾರ್ಥಿಗಳಿಗೆ ಕಥೆಯನ್ನು ರಚಿಸಲು ತಿಳಿಸಬೇಕು. ಈ ಚಟುವಟಿಗೆಗೆ ತರಗತಿಯ ಮಕ್ಕಳನ್ನು 4-5 ಜನರ ಗುಂಪುಗಳನ್ನಾಗಿ ಮಾಡಿ, ಶಿಕ್ಷಕರು 8- 10 ನಿಮಿಷ ಕಾಲಾವಧಿಯನ್ನು ನಿಗದಿ ಪಡಿಸುವುದು. ಯಾವ ತಂಡ ಉತ್ತಮ ಕಥೆಯನ್ನು ಬೇಗ ರಚಿಸುತ್ತದೆಯೋ ಆ ತಂಡ ಗೆಲ್ಲುತ್ತದೆ.

**ಉದಾಹರಣೆ 1 :** ನರಿ, ಕರಡಿ, ಬೇಸಾಯ, ಜೋಳ, ಕಡಲೆಕಾಯಿ.

ನರಿ ಮತ್ತು ಕರಡಿ ಬೇಸಾಯ ಮಾಡಿದವು. ಮೊದಲು ಜೋಳ ಹಾಕಿದವು. ನರಿ '' ಭೂಮಿಯ ಮೇಲಿನದು ನನ್ನದು ಮತ್ತು ಭೂಮಿಯ ಕೆಳಗಿನದು ನಿನ್ನದು ಎಂದು ಹೇಳಿತು ''. ಕರಡಿ ಒಪ್ಪಿತು. ಜೋಳದ ತೆನೆಯನ್ನು ನರಿಯು ತೆಗೆದುಕೊಂಡಿತು. ಕರಡಿಗೆ ಬೇರು ಉಳಿಯಿತು. ಕರಡಿ '' ಮುಂದಿನ ಬಾರಿ ನಾನು ಮೇಲಿನದನ್ನು ತೆಗೆದುಕೊಳ್ಳುತ್ತೇನೆ '' ಎಂದಿತು. ನರಿಯು ಒಪ್ಪಿತು. ಮುಂದೆ ಕಡಲೆಕಾಯಿ ಬೆಳೆದವು. ಆಗ ನರಿಗೆ ಕಡಲೆಕಾಯಿ ಸಿಕ್ಕಿದರೆ, ಕರಡಿಗೆ ಕಡಲೆ ಬಳ್ಳಿ ಸಿಕ್ಕಿತು. ಕರಡಿಗೆ ಬೇಸರವಾಗಿ ನರಿ ಸ್ನೇಹವನ್ನು ಬಿಟ್ಟಿತು.

**ಉದಾಹರಣೆ 2 :** ಕಾಡು, ಗುಹೆ, ಸಿಂಹ, ಇಲಿ, ಬಲೆ.

ಈ ಪದಗಳಿಂದ ಕಥೆಯನ್ನು ಹೆಣೆಯಲು ಶಿಕ್ಷಕರು ಮಕ್ಕಳಿಗೆ ಸೂಚಿಸುವುದು.

ಮಕ್ಕಳು ಚುರುಕಾಗಿದ್ದರೆ, ಅವರಿಂದಲೇ ಪದಗಳನ್ನು ಹೇಳಿಸಿ, ಕಥೆಯನ್ನು ಹೆಣೆಯಲು ಶಿಕ್ಷಕರು ತಿಳಿಸಬಹುದು.

**ಚಿತ್ರ ನೋಡಿ ಕಥೆ ಹೆಣೆಯುವುದು :**

ಒಂದು ಕಥೆಗೆ ಸಂಬಂದಿಸಿದ ಚಿತ್ರಗಳನ್ನು ಶಿಕ್ಷಕರು ಮಕ್ಕಳಿಗೆ ಕಾಣುವಂತೆ ತೂಗುಹಾಕಿ / ಒದಗಿಸಿ ಕಥೆ ಹೆಣೆಯಲು ತಿಳಿಸುವುದು.

**ಉದಾಹರಣೆ : ನರಿ ಕಾಗೆ**











ಈ ರೀತಿಯ ಅನೇಕ ಕಥೆಗಳನ್ನು ಚಿತ್ರಗಳ ಸಹಾಯದಿಂದ ಮಕ್ಕಳಿಂದ ಶಿಕ್ಷಕರು ಹೆಣೆಸಬಹುದು.

# ಆಟಿಕೆ ಮಾಡು

ಅಕ್ಷರಗಳಿಂದ ಆಕೃತಿಗಳು



## ಅಂಕಿಗಳಿಂದ ಆಕೃತಿಗಳು


















## ಓರಿಗಾಮಿ

1. ಕಾಗದವನ್ನು ಮಡಿಚಿ, ವಿವಿಧ ಆಕೃತಿಗಳನ್ನು ಮಕ್ಕಳಿಗೆ ಪರಿಚಯಿಸುವುದು.



ಚೌಕ



ಆಯತ



ತ್ರಿಭುಜ



ಗಾಳಿಪಟ
( ವಜ್ರಾಕೃತಿ )



ಷಟ್ಭುಜಾಕೃತಿ



ಲಂಬಕೋನ ತ್ರಿಭುಜ

2. ಕಾಗದವನ್ನು ಮಡಿಸಿ, ವಿವಿಧ ಕೋನಗಳನ್ನು ಮಕ್ಕಳಿಗೆ ಪರಿಚಯಿಸುವುದು.




ಲಂಬಕೋನ







ಲಘುಕೋನಗಳು







ಲಘುಕೋನಗಳು.

3. ಕಾಗದವನ್ನು ಮಡಿಸಿ, ವಿವಿಧ ಪ್ರಾಣಿಗಳನ್ನು ಮಾಡುವುದನ್ನು ಕಲಿಸುವುದು.

ಎ. ಹಕ್ಕಿಗಳು    ಬಿ. ಮೀನು    ಸಿ. ಕಪ್ಪೆ

೩. ಕಾಗದವನ್ನು ಮಡಿಸಿ, ವಿವಿಧ ಆಕೃತಿಯ ಟೋಪಿಗಳನ್ನು ಮಾಡುವುದನ್ನು ಮಕ್ಕಳಿಗೆ ಕಲಿಸುವುದು.

ಎ. ಗಾಂಧಿ ಟೋಪಿ ಬಿ. ಕಿರೀಟ ಸಿ. ಬಫೂನ್ ಟೋಪಿ

**ಕಲಸಿದ ಜೇಡಿ ಮಣ್ಣು / ಮೈದಾ ಹಿಟ್ಟಿನಿಂದ ಆಟಿಕೆಗಳನ್ನು ತಯಾರಿಸುವುದು :**

ಎಲ್ಲಾ ಮಕ್ಕಳಿಗೂ ಕಲಿಸಿದ ಜೇಡಿ ಮಣ್ಣನ್ನು ಒದಗಿಸಿ, (ಒಂದು ಹಿಡಿಯಷ್ಟು) ತಮಗೆ ಬೇಕಾದ ಆಕೃತಿಯನ್ನು ಮಾಡಲು ಶಿಕ್ಷಕರು ಮಕ್ಕಳಿಗೆ ತಿಳಿಸಬೇಕು. ಮಕ್ಕಳಿಗೆ ಬೇರೆ ಬೇರೆ ಆಕೃತಿಗಳನ್ನು ಮಾಡಲು ಹೇಳಿದರೆ ಹತ್ತಾರು ರೀತಿಯ ಆಕೃತಿಗಳು ರೂಪು ಗೊಳ್ಳುತ್ತವೆ.



# " ಹಾಡೋಣ "

## ಹಾಡುಗಳು :

ಹಾಡುಗಳು ಮಕ್ಕಳ ಗ್ರಹಣ ಶಕ್ತಿಯನ್ನು ಹೆಚ್ಚಿಸುತ್ತವೆ. ಮಕ್ಕಳು ಹಾಡುತ್ತಲೇ ಅನೇ ವೇಳೆ ಮೈಮರೆತು ನಲಿಯುತ್ತಾರೆ. ಮಕ್ಕಳಿಗೆ ಮುದಕೊಡುವ ರಾಗಗಳನ್ನು ಅಳವಡಿಸಿ ಮೂರು ಮತ್ತು ನಾಲ್ಕನೆಯ ತರಗತಿಯ ಎಲ್ಲಾ ಪದ್ಯಗಳನ್ನು ಈ ವಿಭಾಗದಲ್ಲಿ ಮಕ್ಕಳಿ ಹೇಳಿಕೊಡಲಾಗುವುದು. ಅಲ್ಲದೆ ಭಾವೈಕ್ಯತೆಗೆ ಸಂಬಂಧಿಸಿದ ಕೆಲವು ಭಾವಗೀತೆಗಳನ್ನು ಮಕ್ಕಳಿಗೆ ಕಲಿಸಲಾಗುವುದು.

ಸ್ಥಳೀಯ ಬರಹಗಾರರಿಂದ ಬರೆದ ಅಥವಾ ಶಿಕ್ಷಕರು ಸ್ವತಃ ಗೀತೆಗಳನ್ನು ರಚಿಸಿ ಮಕ್ಕಳಿಗೆ ಹೇಳಿಕೊಡಬಹುದು.

ಪಠ್ಯ ಪುಸ್ತಕದಲ್ಲಿನ ಪದ್ಯಗಳನ್ನು ಅಭಿನಯಿಸುತ್ತಾ ಹಾಡುವುದನ್ನು ಮಕ್ಕಳಿಗ ಕಲಿಸಿದರೆ, ಅವರಿಗೆ ಕಂಠಪಾಠದ ಹಿಂಸೆಯಿಂದ ಮುಕ್ತಗೊಳಿಸಿದಂತಾಗುತ್ತದೆ ಮತ್ತು ಭಾವಾರ್ಥವನ್ನು ಮಕ್ಕಳು ಅಂತರ್ಗತ ಮಾಡಿಕೊಳ್ಳಲು ನೆರವಾಗುತ್ತದೆ.

### ಚಿಣ್ಣರ ಲೋಕಕೆ ಪಯಣ

ಚಿಣ್ಣರೆಲ್ಲರ ಪಯಣ
ಚಿಣ್ಣರ ಲೋಕಕೆ ಪಯಣ
ಕುಣಿಯುತ ನಲಿಯುತ ಕಲಿಯುತ ತಿಳಿಯುತ
ಚಿಣ್ಣರ ಲೋಕಕೆ ಸಾಗೋಣ... ॥ ಪ ॥

ಹಾತೆ ದುಂಬಿಯ ಹೂವು ಕಡ್ಡಿಯ
ಆಟದಿಂದಲೇ ಕಲಿಯೋಣ
ಒಂದುಗೂಡುತ ದೇಶವ ಕಟ್ಟುತ
ಒಗ್ಗಟ್ಟಿನ ಬಲ ತಿಳಿಯೋಣ.... ॥ ಪ ॥

ಜಿಂಕೆಯಂತೆ ಜಿಗಿಯುತ ನಾವು
ಕಾಡುಮೇಡನು ಅಲೆಯೋಣ
ಪ್ರಾಣಿ-ಪಕ್ಷಿಗಳ ಕೂಗನು ಕೂಗಿ
ಪರಿಸರ ಉಳಿಸಿರಿ ಅನ್ನೋಣ .... ॥ ಪ ॥

ರಾಷ್ಟ್ರಭಕ್ತಿಯೇ ಶ್ರೇಷ್ಠ ಶಕ್ತಿಯು
ಘೋಷಣೆ ನಾವು ಕೂಗೋಣ
ವಿದ್ಯೆ ಬುದ್ಧಿಯ ನೀತಿ ನಿಯಮದಿ
ದೇಶ ಸೇವೆಯ ಮಾಡೋಣ.... ॥ ಪ ॥

ಇಂದಿನ ಮಗುವೆ ಮುಂದಿನ ಪ್ರಜೆಯು
ಅನ್ನುತ ನಾವು ನಲಿಯೋಣ
ದುಡಿವ ಕೈಗಳೇ ದೇಶಕ್ಕೆ ಆಧಾರ
ಬನ್ನಿರಿ, ಬನ್ನಿರಿ ದುಡಿಯೋಣ ॥ ಪ ॥

ಮಾಯಲಪ್ಪ ಬೊಪ್ಪಸಾಗು

# ಮರವ ಕಡಿಯ ಬೇಡ

ಬೇಡ ಬೇಡ ಗೆಳೆಯ! ನೀ ಮರವ ಕಡಿಯ ಬೇಡ ।
ಬೇಡ ಬೇಡ ಗೆಳತಿ । ನೀ ಮರವ ಕಡಿಯ ಬೇಡ ।
ಮರವ ಕಡಿಯೆ ಭೂಮಿಯು । ಆಗುವುದು ಬೆಂಗಾಡು ॥ ಹ ॥

ಸಕಲ ಪ್ರಾಣಿ-ಪಕ್ಷಿಗಳಿಗೆ । ಅನ್ನ ನೀಡಿ ಸಲಹುತಿರುವ ।
ತನ್ನ ಹಸಿರ ಬಸುರಿನಿಂದ । ಪ್ರಾಣ ವಾಯು ಬಿಡುತಿರುವ ।
ದಣಿದು ಬಂದ ಮನುಜನಿಗೆ । ತಂಪು ನೆರಳ ನೀಡಿತಿರುವ ॥1॥

ಚಿನ್ನಕ್ಕಿಂತ ಮಿಗಿಲಾದ । ಮಣ್ಣನ್ನು ಹಿಡಿದಿಡುವ ।
ಭೂಮಿ ಅಂತರಂಗದಲ್ಲಿ । ನೀರನ್ನು ಕೂಡಿಡುವ ।
ಮದ್ದು-ಬಳ್ಳಿ, ಮೇಜು-ಕುರ್ಚಿ । ಎಲ್ಲವನ್ನು ನೀಡುತಿರುವ ॥2॥

ತಲೆಗೊಂದು ಮರವು ಬೇಕು । ಊರಿಗೊಂದು ವನವು ಬೇಕು ।
ನಾಡಿಗಿಂದು ಮೂರರಲ್ಲಿ । ಒಂದು ಭಾಗ ಕಾಡು ಬೇಕು ।
ಜನರೆಲ್ಲಾ ಒಂದು ಗೂಡಿ । ಕಾಡನ್ನು ಬೆಳೆಸಬೇಕು ॥3॥

ಬಾರೋ ಬಾರೋ ಗೆಳೆಯ । ಕಾಡನ್ನು ಬೆಳೆಸು ಬಾರೋ ॥
ಬಾರೇ ಬಾರೇ ಗೆಳತಿ । ಕಾಡನ್ನು ಬೆಳೆಸು ಬಾರೆ ॥

ಎನ್. ಇಂದಿರಮ್ಮ.

71

## ಹಳ್ಳಿಗಾಡ ಹಸುಗೂಸೆ

ಹಳ್ಳಿಗಾಡ ಹಸುಗೂಸೆ ಹಸು ಕಾಯೋಧೀರ ಬಾಲನೆ
ಸ್ಕೂಲು ಮರೆತು ದಿನವೆಷ್ಟಾಯಿತೋ। ಓ ಹಾಲುಗೆನ್ನೆಯ
ಜೀತಗಾರ ಜೀತ ಸೇರಿ ದಿನವೆಷ್ಟಾಯಿತೋ ॥ ಪ ॥

ಸಾಲು ಸಾಲ ಚಿಂದಿ ಅಂಗಿ ಬೀಸುಗಾಳಿಗೆ ಪಕ್ಕ ಸರಿದು
ಚಳಿಗಾಳಿಗೆ ಬೆನ್ನಕೊಟ್ಟೆಯಾ। ಓ ಹಾಲು ಗೆನ್ನೆಯ
ಜೀತಗಾರ ಚಳಿಗೆ ನೀನು ಮುದುರಿ ನಿಂತೆಯಾ ॥ ಪ ॥
ಅಡವಿಯೊಳಗಣ ದುಷ್ಟಪ್ರಾಣಿಗಳು ಹಿಂಡುಗಟ್ಟಿ ಹಿಂದೆ ಬೀಳಲು
ಓಡಲಾರದೆ ಎಡವಿ ಬಿದ್ದೆಯಾ। ಓ ಹಾಲುಗೆನ್ನೆಯ
ಜೀತಗಾರ ನೆತ್ತರು ಚಿಮ್ಮಿ ನೆಲಕೆ ಹರಿಯಿತೇ ॥ ಪ ॥

ನಿನ್ನ ದುಡಿಮೆ ಬೆಟ್ಟಗಾತ್ರ ದಕ್ಕೋದು ಸ್ವಲ್ಪ ಮಾತ್ರ
ಹೊಟ್ಟೆ ಬಟ್ಟೆಗೂ ಸಾಲದಾಯ್ತಲ್ಲೋ। ಓ ಹಾಲುಗೆನ್ನೆಯ
ಜೀತಗಾರ ಕಡು ದುಃಖದಿ ನೆಲ ಹಿಡಿದೆಯಾ ॥ ಪ ॥

ಬರಡು ಮರದ ಬುಡದಿ ನೀನು ಎರಡು ಕೈಯಿಂದ ಮೋರೆಮುಚ್ಚಿ
ಬಿಕ್ಕಿ ಬಿಕ್ಕಿ ಅಳುತಲಿರುವೆಯಾ। ಓ ಹಾಲುಗೆನ್ನೆಯ
ಜೀತಗಾರ ಕಣ್ಣ ನೀರು ಕಾಲುವೆಯಾಯಿತೇ ॥ ಪ ॥

ಅತ್ತರೆ ನಿನ್ನ ಕಷ್ಟ ತೀರವು ಗೋಳಾಡಿದರೆ ಏನೇನೂ ಆಗದು
ಈಗಲು ಕಲಿಯಲು ಕಾಲವು ಮಿಂಚಿಲ್ಲಾ। ಓ ಹಾಲುಗೆನ್ನೆಯ
ಜೀತಗಾರ ಓದು-ಬರಹ ಕಲಿಯಬಾರಯ್ಯ
ಓದು-ಬರಹ ಕಲಿತು ಬಾಳಯ್ಯ

**ಕೋಟಗಾನ ಹಳ್ಳಿರಾಮಯ್ಯ**

# ನೀವು ನಲಿಯಬೇಕು

ಇನ್ನು ನೀವು ನಲಿಯಬೇಕು; ಓದಿ ಆಡಿ ಕಲಿಯಬೇಕು;
ನಿಸರ್ಗದಾ ನಿಗೂಢ ತಿಳಿಯಲು
ವಿಜ್ಞಾನದ ಚಮತ್ಕಾರ ಅರಿಯಲು
ನಿನ್ನ ಬದುಕಿನ ಸತ್ಯ ಶೋಧ ಮಾಡಲು ॥ ಪ ॥

ಕಾಡಿನಲ್ಲಿ ಇದ್ದನು ಗೆಡ್ಡೆ ಗೆಣಸು ತಿನ್ನುತಾ
ಪ್ರಾಣಿಯಂತೆ ಬದುಕುತ್ತಿದ್ದನು....
ನಾಡಿಗ್ಹೋಗೆ ಬಂದನು ಸಂಘ ಜೀವಿಯಾದನು
ಎಂಬ ಸತ್ಯ ತಿಳಿದಿದೆಯೇನು ?.....
ಮಂಗನಿಂದ ಮನುಜ ಬಂದ ಎಂಬ ಸತ್ಯ ತಿಳಿಯೆ ನೀನು
ಚಿಣ್ಣರ ಮೇಳ ಸೇರಿ ಸತ್ಯವನ್ನು ತಿಳಿಯಲು ॥ ಪ ॥

ಮೇಲಿನಿಂದ ಬರುವುದು ಧರೆಗೆ ಮಳೆಯು ಸುರಿವುದು
ಮೇಲೆ ಏನು ಇರುವುದೆ ?...
ಗಾಳಿಯಿರದಿದ್ದರು ಮನುಜ ಬದುಕಲಾರನು
ಗಾಳಿಯಲ್ಲಿ ಇರುವುದೇನಿದೆ ?...
ಕಡಲ ನೀರು ಆವಿಯಾಗಿ... ಬಾನಿನಲ್ಲಿ ಮೋಡವಾಗಿ
ತಂಗಾಳಿ ಸೋಕಿ, ಮಳೆ ಸುರಿವ ಕಥೆ ತಿಳಿಯಲು ॥ ಪ ॥

ಸೂರ್ಯ ಚಂದ್ರರೆಂದಿಗೂ ದೇವರಲ್ಲ ಓ ಬಂಧು
ರಾಹುಕೇತು ಗ್ರಹಗಳಲ್ಲವೊ....
ಚಂದ್ರನ ಮೇಲೆ ಕಾಲಿಟ್ಟು ಮಂಗಳದೆಡೆಗೆ ಸಾಗಿದ
ಮನುಜ ಶಕ್ತಿ ಮರೆತೆ ಓತಕೋ....
ಸೂರ್ಯ ಚಂದ್ರ ದೇವರಲ್ಲ... ಭೂಮಿಯಂತೆ ಆಕಾಶಕಾಯ
ತಾರೆಗಳ ನಿಜವಾದ ಮರ್ಮವನ್ನು ಅರಿಯಲು ॥ ಪ ॥

ಎಂದು ಎಲ್ಲೂ ಕಾಣದ ಯಾರಿಗೇನು ನೀಡದ
ಮೌಢ್ಯವನ್ನು ನಂಬುವೇತಕೆ ?...
ನಿನ್ನ ಬದುಕಿನುದ್ದಕ್ಕೂ ಸಾವಿರಾರು ಕೊಡುಗೆ ಕೊಟ್ಟ
ವಿಜ್ಞಾನ ಮರೆತ ಏತಕೆ ?
ಅಜ್ಞಾನವ ದೂರ ಮಾಡು-ವಿಜ್ಞಾನವ ನಂಬಿ ನೋಡು
ವಿಜ್ಞಾನ ತಿಳಿದು ನೀನು ಪ್ರಜ್ಞಾವಂತನಾಗಲು ॥ ಪ ॥

**ಕೆ. ಎಸ್. ನಾಡಗೌಡ**

## ಕೋಗಿಲೆ

ಕಪ್ಪು ಬಣ್ಣದ ಕುಹುಕುಹು ಹಕ್ಕಿಯೇ
ನಿನ್ನಯ ಹೆಸರೇನು ?
ಕುಹು ಕುಹು ಎನ್ನುತ ಹಾಕಲು ಕಲಿಸಿದ
ನಿನ್ನಯ ಗುರು ಯಾರು...?

ಚಿಣ್ಣನೆ ಕೇಳು ಕೋಗಿಲೆ ಎನ್ನುತ
ಎನ್ನನು ಕರೆಯುವರೂ...
ಎಲ್ಲರ ಗುರು ಅದು ಪ್ರಕೃತಿಯೆ ಎನ್ನುತ
ಹಾಡಿಗೆ ಗುರು ಅದುವೆ

ಹುಟ್ಟಿದುದು ಎಲ್ಲಿ, ಬೆಳೆದುದು ಎಲ್ಲಿ ?
ಹೇಳೆ ಕೋಗಿಲೆಯೆ
ಕಪ್ಪಿನ ಬಣ್ಣವು ಏತಕೆ ಬಂದಿದೆ ?
ಹೇಳಲೇ ಎನ್ನೊಡನೇ

ಕಾಗೆಯ ಗೂಡಲಿ ಹುಟ್ಟಿದೆ ನಾನು
ಬೆಳೆದೆನು ಬಾನಿನಲ್ಲಿ
ಕಾಗೆಯ ಬಣ್ಣವು ಅಳಿಯದೆ ಉಳಿಯಿತು
ಎನಗದೆ ಹಿತವಾಯ್ತು

ಸಮೂಹ ಸೃಷ್ಟಿ

# ಅಮೃತವಾಣಿ

ಕುಹು ಕುಹು ನೀ ಕೋಗಿಲೆಯೆ
ನಾ ಹಾಡುವ ಹಾಡೊಂದ ಹಾಡುವೆಯಾ
ನಾ ಹೇಳುವ ಮಾತೊಂದ ಕೇಳುವೆಯಾ ॥ ಪ ॥

ಚಿಗುರಿದ ಬನದಲಿ ನೀನಿರುವೆ
ನೀ ಕೂಗುವ ಧ್ವನಿಯಲಿ ನಾನಿರುವೆ
ಹಾಡುತ ಕುಳಿತರೆ ದಿನವೆಲ್ಲಾ
ನಾ ನೋಡುತಲಿರುವೆ ಮನವೆಲ್ಲಾ ॥ ಪ ॥

ಭಾರತ ದೇಶದ ಬಾನಿನೊಳು
ಈ ಧ್ವನಿಗಳ ಮಾರ್ದನಿಗೊಳಿಸುವೆಯಾ
ಭಾವೈಕ್ಯತೆಯನು ಮೂಡಿಸಲು
ನೀ ಅಸಮಾನತೆಯನು ಅಳಿಸುವೆಯಾ ॥ ಪ ॥

ಭೇದ ಭಾವವಾ ಮರೆಸುವೆಯಾ
ನೀ ರಾಷ್ಟ್ರಭಿಮಾನವ ತುಂಬುವೆಯಾ
ಅಂಧಕಾರದಾ ಜನಗಳಿಗೆ
ನೀ ಅಮೃತವಾಣಿಯ ತಿಳಿಸುವೆಯಾ ॥ ಪ ॥

**ಕುವೆಂಪು**

# ಸಾಗರದ ನೀರು

ಸಾಗರದ ನೀರು ಕಾದು ಆವಿಯಾಗಿ
ಮೇಲೆ ತಂಪಾಗಿ ಚಲಿಸುವುದು ಮೋಡವಾಗಿ
ಭಾರವಾಗಿ ಬೀಳುವುದು ಮಳೆಯಾಗಿ
ಮತ್ತೆ ಸಾಗರವ ಸೇರುವುದು ನದಿಯಾಗಿ ॥ ಪ ॥

ಗಾಳಿಯಲಿ ತೇಲುವವು ಹಗುರವಾಗಿ
ಅದರ ದಿಕ್ಕಿನಲಿ ಚಲಿಸುವವು ವೇಗವಾಗಿ
ಸ್ಥಾಯಿ ವಿದ್ಯುತ್ ಕಣಗಳು ಘರ್ಷಣೆಯಾಗಿ
ಕೋಲ್‌ಮಿಂಚು ಹೊಳೆಯುವುದು ವಿದ್ಯುತ್‌ಆಗಿ ॥ ಪ ॥

ಮೋಡದ ಹನಿ ಮೂಲಕ ಸೂರ್ಯನ ಕಿರಣ
ಆಗುವುದು ಅದರಲಿ ವಕ್ರೀಭವನ
ವರ್ಣ ವಿಭಜನೆ ಹೊಂದಿ ಏಳು ಬಣ್ಣ
ಕಾಮನ ಬಿಲ್ಲಾಗಿ ಕಾಣುವುದಣ್ಣ ॥ ಪ ॥

ಹಿಂಗಾರು ಮುಂಗಾರು ಮಾರುತಗಳು
ಮೋಡಗಳ ಎಳೆದು ತಂದು ಮಳೆಯು ಬಂದು
ಬೆಳೆಗಳು ಬೆಳೆಯುವವು ಹುಲುಸಾಗಿ
ನಮ್ಮ ರೈತರ ಜೀವನ ಹರುಷವಾಗಿ ॥ ಪ ॥

ಭಾರತದ ಬೇಸಾಯಕೆ ಮಳೆಗಾಲ
ಅದು ಬಾರದಿದ್ದರೆ ಬರುವುದು ಬರಗಾಲ
ಮಳೆಯನೆ ನಂಬಿದ ನಮ್ಮ ರೈತ
ಬೆಳೆಯಿಲ್ಲದೆ ಬಡವಾನಾದ ಅನ್ನದಾತ ॥ ಪ ॥

ಜಿ. ಹನುಮಂತರಾಯಪ್ಪ

77

# ಅಮ್ಮ ಅಮ್ಮ ಅಮ್ಮ...

ಅಮ್ಮ ಅಮ್ಮ ನಮ್ಮ ತೋಳಿಗೆ ರೆಕ್ಕೆ ಹಚ್ಚು
ಸೊಂಟಕೆ ಬೆಳ್ಳಿ ಪಟ್ಟಿ ಕಟ್ಟಿ ಹಕ್ಕಿ ಪುಚ್ಚ ಚುಚ್ಚು ॥ ಪ ॥

ಹಾರುತ್ತೇವೆ ರೆಕ್ಕೆ ಬಿಚ್ಚಿ ತೆಂಗಿನ ಮರಕೂ ಮೇಲೆ
ಜಗಲಿ ಮೇಲೆ ನಿಂತೇ ನಮಗೆ ಅಮ್ಮ ಟಾ ಟಾ ಹೇಳೆ ॥ ಪ ॥

ಹಾಗೆ ಹಾಗೆ ಮೇಲೆ ಹೋಗಿ ಮುಟ್ಟುತ್ತೇವೆ ಮೋಡ
ಕೇಳುತ್ತೇವೆ ಯಾರೂ ಕೇಳದ ಚುಕ್ಕಿ ಹಾಡೋ ಹಾಡ ॥ ಪ ॥

ತಿಂಗಳೂರಿನ ಅಂಗಳ ಸೇರಿ ಬೆಳ್ಳಿ ಮೊಲವನು ನೋಡಿ
ಹಿಡಿಯುತ್ತೇವೆ ಹಾರೋ ಬಣ್ಣದ ಜಿಂಕೆಯ ಹೇಗೋ ಮಾಡಿ ॥ ಪ ॥

ಕೊಟ್ಟೇ ಕೊಡುವನು ಚಂದ ಮಾಮ ಕೆನ್ನೆ ತುಂಬಾ ಮುತ್ತು
ಮುದ್ದಿಸಿ ಬೆಟ್ಟದ ತುದಿಗೆ ಇಳಿಸುವ ಯಾರೂ ಇಲ್ಲದ ಹೊತ್ತು ॥ ಪ ॥

ಡಾ. ಹೆಚ್.ಎಸ್. ವೆಂಕಟೇಶ್ ಮೂರ್ತಿ

# ಚಿನ್ನದ ಒಡವೆ

ಚಿನ್ನದ ಒಡವೆಗಳೇತಕೆ ಅಮ್ಮಾ ?
ತೊಂದರೆ ಕೊಡುವವು ಬೇಡಮ್ಮಾ

ಬಣ್ಣದ ಬಟ್ಟೆಗಳೇತಕೆ ಅಮ್ಮಾ
ಮಣ್ಣಿನೊಳಾಡಲು ಬಿಡಮ್ಮಾ ॥ 1 ॥

ಚಂದಕೆ ಚಂದಕೆ ಎನ್ನುವೆಯಮ್ಮಾ
ಚಂದವು ಯಾರಿಗೆ ಹೇಳಮ್ಮ
ನೋಡುವವರಿಗಿದು ಚೆಂದವು ಚೆಂದ
ಆಡುವ ಎನಗಿದು ಬಲು ಬಂಧ ॥ ಚಿನ್ನದ ॥

ನನ್ನೀ ಶಿಶುತನ ನಿನ್ನೀ ತಾಯ್ತನ
ಎರಡೇ ಒಡವೆಗಳ್ ಸಾಕಮ್ಮಾ
ನಾ ನಿನಗೊಡವೆಯು ನೀ ನನಗೊಡವೆಯು
ಬೇರೆಯ ಒಡವೆಗಳೇತಕೆ ಅಮ್ಮ ॥ ಚಿನ್ನದ ॥

ಕುವೆಂಪು

# ಹಲವಾರು ಮಕ್ಕಳು

ಹಲವಾರು ಮಕ್ಕಳು ಸುಮ್ಮನೆ ಏತಕೆ
ಹುಟ್ಟಲಿ ಒಂದು ವಂಶಾದ ಕುಡಿಯಾಗಿ
ಕಲಿಯಲಿ ಜ್ಞಾನ ಹರುಷಾದಿ ॥ 1 ॥

ಓದಿದ ಮಕ್ಕಳ ಮುಖವನ್ನು ನೋಡಿರಿ
ನೇಸರಿನಂತೆ ಹೊಳೆಯುತ। ಇರುವುದು ।
ತುಳುಕದ ಕೊಡವ ನೋಡಿರಿ ॥ 2 ॥

ಪಟ ಪಟ ಮಾತನು ಆಡುತಲಿದ್ದರೆ
ಸುಮ್ಮನೆ ನಿಂತು ಕೇಳಬೇಕು। ಅವರಿಂದ ।
ಜ್ಞಾನದ ಜ್ಯೋತಿಯ ಪಡೆಯಬೇಕು ॥ 3 ॥

ಅಜ್ಞಾನ ಓಡಿಸಿ ಮನೆ ಮನೆ ಬೆಳಗುವ
ದೀಪವ ಹಣತೆ ಆದರೆ। ಅಣ್ಣಯ್ಯ।
ನಾಡಲ್ಲಿ ತಾರೆ ಆಗುವರು ॥ 4 ॥

ಕತ್ತಲು ಓಡಿಸಿ ಸುಜ್ಞಾನ ಬರಲಿಕ್ಕೆ
ಎಲ್ಲರ ಮಗುವು ಕಲಿತಾರೆ। ದೇಶವು।
ಶಾಂತಿಯ ತವರು ಆಗುವುದು ॥ 5 ॥

ಸುರೇಂದ್ರ ಅಡಿಗ

# ಏತಕ್ಕೆಂದು ಏತಕ್ಕೆಂದು

( ಮಕ್ಕಳ ಜೊತೆಗೂಡಿ ಹಾಡಿದಲ್ಲಿ ಮತ್ತು ಸಭಿಕರನ್ನೆಲ್ಲ ಪಲ್ಲವಿ ಹಾಕಲು ಪ್ರೋತ್ಸಾಹಿಸಿದರೆ ಹೆಚ್ಚು ಪ್ರಭಾವಯುತವಾಗಿರುತ್ತದೆ )

ಏತಕ್ಕೆಂದು ಏತಕ್ಕೆಂದು
ಏತಕ್ಕೆಂದು ಏತಕ್ಕೆಂದು ಏತಕ್ಕೆಂದು ॥ ಪ ॥
ಬಾನಲ್ಲಿ ಕಾಮನ ಬಿಲ್ಲು ಏತಕ್ಕೆಂದು
ನಕ್ಷತ್ರ ಮಿನುಗೋದು ಏತಕ್ಕೆಂದು ॥ ಪ ॥

ತುಂಬೆ ಹೂ ಬಿಳುಪು ಏತಕ್ಕೆಂದು
ಗುಲಾಬಿ ಹೂ ಕೆಂಪು ಏತಕ್ಕೆಂದು
ಮಿಣುಕು ಹುಳುವಿನ ಹಿಂದೆ ಮಿಣ ಮಿಣನ
ಮಿಣಗೋದು ಏತಕ್ಕೆಂದು ॥ ಪ ॥

ಕಾಗೆಯು ಗೂಗೆಯು ಬಾನಲ್ಲಿ ಹಾರ್ದಂಗೆ
ಬೆಕ್ಕದು ಹಾರೋಲ್ಲ ಏತಕ್ಕೆಂದು
ಪಾರಿವಾಳ ಇಣಚಿ ಒಂದಾಗಿ ನಕ್ಕಂಗೆ
ಕೆಂಪಾದ ದಾಳಿಂಬೆ ಕೈ ತಟ್ಟಿ ನಗೋಲ್ಲ ಏತಕ್ಕೆಂದು ॥ ಪ ॥

ದೂರದ ಬೆಟ್ಟದ ಮರಗಳೆಲ್ಲಾ
ನುಣ್ಣಗೆ ಬೋಳಾಯ್ತು ಏತಕ್ಕೆಂದು
ನಗಬೇಕಾದ ಮಕ್ಕಳಿನ್ನೂ ಜೋರಾಗಿ
ಅಳ್ತಿದ್ದಾರೆ ಏತಕ್ಕೆಂದು ॥ ಪ ॥

ಮಾರಣ್ಣ ಬೋರಣ್ಣ ಅವರಮ್ಮ
ಇವನ ತಂಗಿ ಭಿಕ್ಷೆ ಬೇಡ್ತಿದ್ದಾರೆ ಏತಕ್ಕೆಂದು
ಅನ್ನ ಔಷಧಿ ಪಡೆಯುವ ದುಡ್ನಲ್ಲಿ
ಬಾಂಬನ್ನು ಮಾಡ್ತಿದ್ದಾರೆ ಏತಕ್ಕೆಂದು ॥ ಪ ॥

ಜಾತಿ ಮತದ ಬಲೆಯಲ್ಲಿ ಸಿಕ್ಕೊಂಡು
ನಾವೆಲ್ಲ ಸಾಯ್ತಿದ್ದೀವಿ ಏತಕ್ಕೆಂದು
ಅನ್ನದ ಕೂಗು ಏತಕ್ಕೆಂದು
ಬಡತನ ಇರುವುದು ಏತಕ್ಕೆಂದು
ವಿಜ್ಞಾನ ಇರುವುದು ಏತಕ್ಕೆಂದು ॥ ಪ ॥

ಕೇಳುವ ಕಾಲ ಬಂದಿದೆ ಈಗ
ಎಲ್ಲೆಲ್ಲಿ ಅನ್ಯಾಯ ಹೆಚ್ಚಾಗಿ ನಡೆದಿದೆ
ಅಲ್ಲಲ್ಲಿ ಭಯಪಡದೆ ತಲೆ ಎತ್ತಿ ಎದೆ ಎತ್ತಿ
ಏತಕ್ಕೆಂದು ಏತಕ್ಕೆಂದು ಏತಕ್ಕೆಂದು
ಕೇಳುವ ಕಾಲ ಬಂದಿದೆ ಈಗ ॥ ಪ ॥

ಸಮೂಹ ಸೃಷ್ಠಿ

## ವಂದನೆ ಗೀತೆ

ಹೋಗಿ ಬರುವೆವು ನಮಸ್ಕಾರ
ಚಿಣ್ಣರ ಮೇಳಕೆ ಜಯಕಾರ
ಬೇಕು ನಿಮ್ಮಯ ಸಹಕಾರ
ಸೇರೋಣ ನಾವೆಲ್ಲ ಮುಂದಿನ ವಾರ ॥ ಪ ॥

ಶಿಕ್ಷಣಾರ್ಥಿಗಳೇ ಗಣ್ಯರೆ ಚಿಣ್ಣರೆ
ಎಲ್ಲ ಬಂಧುಗಳಿಗೊಂದನೆ
ಇಷ್ಟು ದಿನವು ಜೊತೆಯಲ್ಲಿ ಕಲೆತು
ಸೇರಿದ ನಿಮಗೆಲ್ಲ ನಮಸ್ಕಾರ ॥ ಪ ॥

ಇಂದಿನ ದಿನವನು ಇಂದೇ ಮರೆಯದೆ
ಮುಂದಿನ ದಿನ ನಾವು ಸೇರೋಣ
ಸೇರಿದ ದಿನದಿ ಇಂದಿನ ದಿನವನು
ಸ್ಮರಿಸುತ ಸವಿ ನುಡಿ ನುಡಿಯೋಣ ॥ ಹೋಗಿ ॥

ರಾಮಯ್ಯ

# ಆಟ ಆಡು

ಸಂಗ್ರಹ : ರಚನೆ : **ಆರ್. ಭಾಸ್ಕರ್**

## ಪರಿಚಯದ ಆಟ 1

ಎಲ್ಲರನ್ನು ವೃತ್ತಾಕಾರದಲ್ಲಿ ಕುಳ್ಳಿರಿಸುವುದು ಅವರಲ್ಲಿ ಕೆಲವರನ್ನು ಆಯ್ಕೆ ಮಾಡಿಕೊಂಡು (ಸುಮಾರು 10 ರಿಂದ 15 ಮಕ್ಕಳನ್ನು) ಮಧ್ಯದಲ್ಲಿ ಸಣ್ಣ ವೃತ್ತದಲ್ಲಿ ನಿಲ್ಲುವಂತೆ ಹೇಳಿ ಮೊದಲನೆಯವರು ತಮ್ಮ ಹೆಸರನ್ನು ಹೇಳುವುದು ಎರಡನೆಯವರು ಮೊದಲನೆಯವರ ಹೆಸರನ್ನು ಹೇಳಿ ತಮ್ಮ ಹೆಸರನ್ನು ಹೇಳುವುದು ಮೂರನೆಯವನು ಹೆಸರನ್ನು ಹೇಳಿ ತನ್ನ ಹೆಸರನ್ನು ಹೇಳಬೇಕು. ಮೊದಲಿನವರ ಎರಡನೆಯವರ ನಾಲ್ಕನೆಯವನು ಮೊದಲನೆಯವರ, ಎರಡನೆಯವರ ಮತ್ತು ಮೂರನೆಯವರ ಹೆಸರನ್ನು ಹೇಳಿ ನಂತರ ತಮ್ಮ ಹೆಸರನ್ನು ಹೇಳುವುದು ಹೀಗೆ ಮುಂದುವರೆಯ ಬೇಕು ಯಾರು ಹೇಳಲು ಸಾಧ್ಯವಾಗುವುದಿಲ್ಲವೋ ಅವರನ್ನು ಮೊದಲನೆಯವರನ್ನಾಗಿ ಮಾಡಿ ಮತ್ತೆ ಪ್ರಾರಂಭಿಸಬೇಕು. ಯಾರು ಕೊನೆಯಲ್ಲಿ ಎಲ್ಲರ ಅಥವಾ ಹೆಚ್ಚು ಹೆಸರನ್ನು ಹೇಳುತ್ತಾರೋ ಅವರಿಗೆ ಅಭಿನಂದಿಸುವುದು. ( ಬೇರೆ ಬೇರೆ ಊರಿನ ಅಥವಾ ಶಾಲೆಗಳ ಮಕ್ಕಳು ಸೇರಿದ್ದರೆ ಈ ಆಟ ಆಡಿಸುವುದು ಸೂಕ್ತ )

## ಪರಿಚಯದ ಆಟ 2

ಕಾರ್ಯಕ್ರಮದ ಮೊದಲಿಗೆ ಎಲ್ಲರನ್ನೂ ವೃತ್ತಾಕಾರದಲ್ಲಿ ನಿಲ್ಲಿಸಿ ಒಂದು ಕಡೆಯಿಂದ ಪರಿಚಯ ಪ್ರಾರಂಭಿಸುವುದು. ಪ್ರಾರಂಭಿಸಿದವರು ತನ್ನ ಹೆಸರನ್ನು ಹೇಳುವುದು ಉಳಿದ. ಎಲ್ಲರೂ ಆ ಹೆಸರಿನ ಮೊದಲ ಅಕ್ಷರದಿಂದ ಪರಿಸರದಲ್ಲಿರುವ ವಸ್ತುಗಳು, ಜೀವಿಗಳ, ಸಸ್ಯಗಳ ಹೆಸರುಗಳನ್ನು ಒಬ್ಬೊಬ್ಬರು ಹೇಳುವುದು. ಈಗ ಮಕ್ಕಳಲ್ಲಿ ಪರಿಸರದ ಪರಿಚಯದ ಜೊತೆಗೆ ಎಲ್ಲರ ಹೆಸರನ್ನು ಪರಿಚಯಿಸಬಹುದು.

## ಪರಿಚಯದ ಆಟ 3

ವೃತ್ತಾಕಾರದಲ್ಲಿ ನಿಲ್ಲಿಸಿ ಒಂದು ಕಡೆಯಿಂದ ಪರಿಚಯ ಪ್ರಾರಂಭಿಸುವುದು. ಪ್ರಾರಂಭಮಾಡಿದವರು ತನ್ನ ಹೆಸರನ್ನು ಹೇಳಿ ಆ ಹೆಸರಿನ ಪ್ರಾಸದಲ್ಲಿ ಬರುವ ಹಣ್ಣು

ಅಥವಾ ತರಕಾರಿ ಅಥವಾ ಪ್ರಾಣಿ ಅಥವಾ ಪಕ್ಷಿಗಳ ಹೆಸರನ್ನು ಹೇಳುವುದು. ಇದರಂತೆ ಒಬ್ಬೊಬ್ಬರಾಗಿ ಹೇಳುತ್ತಾ ಹೋಗುವುದು. ಕೊನೆಯವನು ಎಲ್ಲರ ಪರಚಿಯ ಹೇಳಲು ಸಮರ್ಥನಾಗುತ್ತಾನೆ.

## ಎಷ್ಟಪ್ಪಾ? ಎಷ್ಟು?

ವೃತ್ತಾಕಾರದಲ್ಲಿ ಎಲ್ಲರೂ ನಿಧಾನವಾಗಿ ಓಡುತ್ತಿರಬೇಕು. ನಾಯಕನು ಮಧ್ಯದಲ್ಲಿ ನಿಂತು ಎಷ್ಟಪ್ಪಾ ಎಷ್ಟು? ಎಂದು ಹೇಳಿದರೆ ಓಡುತ್ತಿರುವವರು. ನೀವೇಳಿದಷ್ಟು ಎಂದು ಹೇಳುತ್ತಾ ಓಡಬೇಕು. ನಾಯಕನು ಕೆಲವು ಬಾರಿ ಹೇಳಿದ ನಂತರ ನಾಲ್ಕು ಎಂದ ತಕ್ಷಣ ನಾಲ್ಕು ನಾಲ್ಕು ಜನರು ಒಟ್ಟಾಗಿ ಕೈ ಹಿಡಿದು ಗುಂಪಿನಲ್ಲಿ ನಿಲ್ಲಬೇಕು. ನಾಲ್ಕಕ್ಕಿಂತ ಹೆಚ್ಚಾದ ಗುಂಪು ಅಥವಾ ಕಡಿಮೆ ಇದ್ದವರು ಔಟ್ ಆಗುತ್ತಾರೆ. ನಾಲ್ಕೂವರೆ ಎಂದರೆ 4 ಜನ ನಿಲ್ಲಬೇಕು. ಒಬ್ಬರು ಕೂರಬೇಕು. ಈಗ ಆಟ ಮುಂದುವರಿಸಬೇಕು ಕೊನೆಯಲ್ಲಿ ಉಳಿದವರು ಗೆಲ್ಲುತ್ತಾರೆ.

## ಕೋತಿ ಕೋಳಿ ಆಟ

ಹದಿನೈದು ಜನರ ಎರಡು ಗುಂಪುಗಳನ್ನು ಸಾಲಾಗಿ (ಎದುರು-ಬದುರಾಗಿ) ನಿಲ್ಲಸಬೇಕು. ಎರಡು ಸಾಲುಗಳ ನಡುವೆ 5ರಿಂದ 8 ಅಡಿ ಅಂತರವಿರಬೇಕು. ಈ ಎರಡು ಸಾಲುಗಳ ಹಿಂಬದಿಗೆ 20 ಅಡಿಯಲ್ಲಿ ಒಂದೊಂದು ಗೆರೆ ಎಳೆದಿರಬೇಕು. ನಾಯಕನು ಒಂದು ಗುಂಪಿಗೆ ಕೋತಿ ಎಂದು ಇನ್ನೊಂದು ಗುಂಪಿಗೆ ಕೋಳಿ ಎಂದು ಹೆಸರು ಕೊಡಬೇಕು. ನಂತರ ನಾಯಕನು ಕೋ...ಕೋ.....ಕೋ...ಕೋಳಿ ಎಂದ ತಕ್ಷಣ ಕೋಳಿ ಗುಂಪಿನವರು ಕೋತಿ ಗುಂಪಿನವರನ್ನು ಅವರ ಹಿಂದೆ ಹಾಕಿದ ಗೆರೆ ತಲುಪುದರೊಳಗೆ ಹಿಡಿಯಬೇಕು. ಈಗ ಕೋ....ಕೋ...ಕೋತಿ ಎಂದರೆ ಕೋತಿ ಗುಂಪಿನವರು ಕೋಳಿ ಗುಂಪಿನವರನ್ನು ಹಿಂದಿನ ಗೆರೆ ತಲುಪುವುದರೊಳಗೆ ಮಟ್ಟಬೇಕು. ಈಗ ಯಾವ ಗುಂಪುನವರು ಹೆಚ್ಚು ಜನರನ್ನು ಹಿಡಿಯುತ್ತಾರೋ ಅವರು ಗೆಲ್ಲುತ್ತಾರೆ.

## ಪೋಸ್ಟ್‌ಮ್ಯಾನ್ ಆಟ.

ವೃತ್ತದಲ್ಲಿ ಎಲ್ಲರನ್ನೂ ಕುಳ್ಳಿರಿಸುವುದು ಪ್ರತಿಯೊಬ್ಬರೂ ಒಂದೊಂದು ಊರಿನ ಹೆಸರು ಹೇಳುವುದು. ನಾಯಕ ಬರೆದುಕೊಳ್ಳಬೇಕು. (ಯಾರಿಗೂ ತೋರಿಸಬಾರದು)

ಒಬ್ಬರನ್ನು ನಿಲ್ಲಿಸಿ. ಒಂದು ಊರಿನ ಹೆಸರನ್ನು ನಾಯಕ ಹೇಳಬೇಕು. ವೃತ್ತದಲ್ಲಿ ಆ ಊರಿನ ಹೆಸರಿನವನು. ಯಾರು ಇರುತ್ತಾನೋ ಅವನ ಮುಂದೆ ಹೋಗಿ ತೋರಿಸಬೇಕು. ಬೇರೆಯವರನ್ನು ತೋರಿಸಿದರೆ ಅವನು ತೋರಿಸಿದವನ ಬೆನ್ನಿಗೆ ಸೀಲ್ ಹಾಕಬೇಕು. (ಗುದ್ದಬೇಕು) ಸರಿಯಾಗಿ ತೋರಿಸಿದರೆ ತೋರಿಸಿದವನು ಗುದ್ದಬೇಕು.

## ಹೆಚ್ಚು ಉದ್ದದ ಆಟ

ಎರಡು ಸಾಲುಗಳನ್ನು ಮಾಡಿ ನಿಲ್ಲಿಸಬೇಕು ( ಸಮನಾಗಿರಬೇಕು) ನಾಯಕ ಸೂಚನೆ ಕೊಟ್ಟತಕ್ಷಣ ತಮ್ಮಲ್ಲಿರುವ ವಸ್ತುಗಳಿಂದ ತಾವೂ ಸೇರಿದ ಹಾಗೆ ಉದ್ದವಾದ ಸಾಲನ್ನು ಗುಂಪಿನವರು ಮಾಡಬೇಕು. ನಂತರ ಅದನ್ನು ಸರಿಯಾಗಿ ಅಳೆಯಬೇಕು. ಯಾರು ಉದ್ದ ಸಾಲನ್ನು ಮಾಡಿರುತ್ತಾರೋ ಅವರು ಗೆಲ್ಲುತ್ತಾರೆ.

## ಹೆಸರು ಪತ್ತೆ ಹಚ್ಚುವ ಆಟ

ವೃತ್ತಾಕಾರದ ಗುಂಪಿನಿಂದ ಒಬ್ಬರು ದೂರ ಹೋಗಿ ನಿಲ್ಲಬೇಕು. ಗುಂಪಿನವರಿಗೆ ನಾಯಕ ಪ್ರಾಣಿ ಅಥವಾ ಸಸ್ಯದ ಒಂದು ಹೆಸರು ಹೇಳಬೇಕು. ಎಲ್ಲರೂ ಚಪ್ಪಾಳೆ ತಟ್ಟಿದ ನಂತರ ದೂರ ಹೋಗಿದ್ದ ವ್ಯಕ್ತಿ ಗುಂಪಿಗೆ ಬಂದು ಪ್ರಶ್ನೆ ಕೇಳಬೇಕು.

**ಉದಾಹರಣೆಗೆ :** ನಾಯಕ ಕರಡಿ ಎಂದು ಹೇಳಿರುತ್ತಾನೆ ಎಂದುಕೊಳ್ಳೋಣ. ವ್ಯಕ್ತಿಯು ಸಸ್ಯನಾ ? ಎಂದು ಪ್ರಶ್ನೆ ಕೇಳುತ್ತಾನೆ. ಗುಂಪಿನವರು ಹೌದು- ಇಲ್ಲ ಇಷ್ಟನ್ನೇ ಹೇಳಬೇಕು. ಸಸ್ಯನಾ ಎಂದಾಗ ಗುಂಪಿನವರು ಇಲ್ಲ ಎನ್ನುತ್ತಾರೆ ಪ್ರಾಣಿನಾ ಎಂದು ಕೇಳುತ್ತಾನೆ. ಹೌದು ಎನ್ನುತ್ತಾರೆ. ನಾಲ್ಕು ಕಾಲುಗಳಿವೆಯೇ ? ಗುಂಪಿನವರು ಹೌದು ಎನ್ನುತ್ತಾರೆ. ಮಾಂಸ ಹಾರಿಯೋ ? ಕಪ್ಪು ಬಣ್ಣವಿದೆಯೇ ? ಸೊಂಡಿಲಿದೆಯೋ ? ನೀರಿನಲ್ಲಿ ವಾಸ ಮಾಡುತ್ತದೆಯೋ ? ಮೈ ತುಂಬಾ ಕೂದಲುಗಳಿವೆಯೇ ? ಈ ಹಲವಾರು ಪ್ರಶ್ನೆ ಕೇಳಬೇಕು. ಹೌದಾಗಿದ್ದರೆ ಹೌದು ಎಂದು ಗುಂಪಿನವರು ಹೇಳಬೇಕು ಇಲ್ಲದಿದ್ದರೆ ಇಲ್ಲ ಎಂದು ಹೇಳಬೇಕು. ಕೊನೆಗೆ ವ್ಯಕ್ತಿ ಯೋಚಿಸಿ ಕರಡಿ ಎಂದು ಹೇಳುತ್ತಾನೆ. ಹೀಗೆ ಆಟ ಮುಂದುವರೆಯುತ್ತದೆ.

## ನಿಲ್ಲು ಎಂದರೆ ಓಡು, ಓಡು ಎಂದರೆ ನಿಲ್ಲುವ ಆಟ

ಮಕ್ಕಳನ್ನು ದೊಡ್ಡ ವೃತ್ತಾಕಾರದಲ್ಲಿ ನಿಲ್ಲಿಸಿ ನಂತರ ಆಟ ಪ್ರಾರಂಭಿಸಬೇಕು. ನಾಯಕ ನಿಲ್ಲಿ ಎಂದರೆ ಎಲ್ಲರೂ ಓಡಬೇಕು. ಓಡಿ ಎಂದರೆ ಎಲ್ಲರೂ ನಿಲ್ಲಬೇಕು ಯಾರು ನಿಲ್ಲಿ ಎಂದಾಗ ನಿಂತರೆ ಓಡಿ ಎಂದಾಗ ಓಡುವರೋ ಅವರು ಔಟಾಗುತ್ತಾರೆ. ( ಅವರನ್ನು ವೃತ್ತದ ಮಧ್ಯಭಾಗದಲ್ಲಿ ಕುಳ್ಳಿರಿಸಿ) ಕೊನೆಗೆ ಯಾರು ಉಳಿಯುತ್ತಾರೋ ಅವರಿಗೆ ಎಲ್ಲರಿಂದ ಚಪ್ಪಾಳೆ ಹಾಕಿಸಿ (ನಾಯಕರು ಆಟವಾಡಿಸುವಾಗ ಕೆಲವೊಮ್ಮೆ ಸರಾಗವಾಗಿ ಕೆಲವೊಮ್ಮೆ ನಿಧಾನವಾಗಿ ನಿಲ್ಲಿ........ ಓಡಿ....... ಎಂದು ಹೇಳುತ್ತಿರಬೇಕು.

## ನೀರಾಟ

ಮಕ್ಕಳನ್ನು ಎದುರು ಬದರಾಗಿ ಸಾಲಿನಲ್ಲಿ ನಿಲ್ಲಿಸುವುದು. ಎರಡೂ ಸಾಲಿನ ಒಂದೊಂದು ತುದಿಗೆ ನೀರು ತುಂಬಿರುವ ಬಕೆಟ್ ಇಡುವುದು. ಇನ್ನೊಂದು ತುದಿಗೆ ಲೋಟ ಇಡುವುದು. ಬಕೆಟ್ ಪಕ್ಕದಲ್ಲಿ ಎರಡೂ ಗುಂಪಿನ ಮೊದಲ ವ್ಯಕ್ತಿಗಳು ಮಾತ್ರ ನಾಯಕ 1 2 3 ಸ್ಟಾರ್ಟ್ ಎಂದ ಕೂಡಲೆ ನೀರನ್ನು ಒಂದು ಬೊಗಸೆಯಲ್ಲಿ ತೊಡಿಕೊಂಡು ಪಕ್ಕದವನ ಕೈಗೆ ಹಾಕಬೇಕು. ಆತ ಅವನ ಪಕ್ಕದವನ ಕೈಗೆ ಹಾಕಬೇಕು. ಹೀಗೆ ಸಾಲಿನ ತುದಿಯಲ್ಲಿ ಇರುವ ಲೋಟವನ್ನು ಯಾರು ಬೇಗ ತುಂಬಿಸುತ್ತಾರೋ ಅವರು ಗೆಲ್ಲುತ್ತಾರೆ.

## ಸಹಕಾರದ ಗುರಿಯಾಟ

ಐದು ಮಕ್ಕಳ ಎರಡು ಗುಂಪುಗಳನ್ನು ಮಾಡಿಕೊಂಡು, ಐದು ಐದು ಮಕ್ಕಳ ಎರಡು ಚಿಕ್ಕ ವೃತ್ತವನ್ನು ಮಾಡಿಕೊಂಡು ನಿಲ್ಲಿಸಿ. ಒಂದು ಪೆನ್ಸಿಲ್‌ನ ತುಂಡಿಗೆ ಐದು ಅಡಿ ಉದ್ದದ ದಾರವನ್ನು ಕಟ್ಟಿ ಒಂದೊಂದು ದಾರದ ತುದಿಯನ್ನು ಒಬ್ಬೊಬ್ಬರ ಕೈಗೆ ಕೊಡಿ. (ಎರಡು ಗುಂಪಿಗೂ ಕೊಡಬೇಕು ) ನಾಯಕ 1 2 3 ಸ್ಟಾರ್ಟ್ ಎಂದ ತಕ್ಷಣ ಎರಡೂ ಗುಂಪಿನವರು ವೃತ್ತಗಳ ಮಧ್ಯದಲ್ಲಿ ಇರುವ ಖಾಲಿ ಬಾಟಲ್‌ನ ಬಾಯಿಗೆ ಪೆನ್ಸಿಲ್ ಹಾಕಬೇಕು. ಯಾರು ಮೊದಲು ಹಾಕುತ್ತಾರೊ ಅವರು ಗೆಲ್ಲುತ್ತಾರೆ .

## ಕೋಳಿ ಹಾಡು

ನಮ್ಮ ಕೋಳಿ ಕೂಗುವಾಗ ಕೂಗುವಾಗ ಕೂಗುವಾಗ
ಏನೆನ್ನುತ್ತೆ ಕೇಳಿ ಬೇಗ ಕೇಳಿ ಬೇಗ ಕೇಳಿ ಬೇಗ
ಕೋ ಕೋ ಕೋ, ಕೋ
ಮೊಟ್ಟೆ ಇಟ್ಟ ಕಪ್ಪು ಕೋಳಿ ಕಪ್ಪು ಕೋಳಿ ಕಪ್ಪು ಕೋಳಿ
ಮೊಟ್ಟೆ ನೋಡಿ ಕೂಗಿತು ಕೋಳಿ ಕೂಗಿತು ಕೋಳಿ
ಮೊಟ್ಟೆ ಬಿಳಿ ಮೊಟ್ಟೆ ಬಿಳಿ ಮೊಟ್ಟೆ

## ಕಾಡ ಬೆಳೆಸಿರಣ್ಣ

ಕಾಡ ಬೆಳಸಿರಣ್ಣ ನೀವು ನಾಡ ಉಲಿಸಿರಣ್ಣ
ಕಾಲುವೆ ತೊರೆಗಳು ತುಂಬಿ ಹರಿಯಲು ಮರಗಿಡ ಬೇಕಣ್ಣಾ......
ಸತ್ಯ ತಿಳಿಯಿರಣ್ಣಾ ಇದನ್ನು ನಿತ್ಯ ನೆನೆಯಿರಣ್ಣಾ
ವಿಜ್ಞಾನ ಜ್ಞಾನವ ದೇಶಕ್ಕೆ ಹರಡಲು ಮುಂದೆ ಬನ್ನಿರಣ್ಣಾ ॥ ಪ ॥
ಬರಗಾಲ ತಡೆಯಣ್ಣಾ ಅದಕ್ಕೆ ಪರಿಸರ ಬೇಕಣ್ಣಾ
ಮಣ್ಣಿನ ಸವಕಳಿ ತಪ್ಪಿಸಲು ನೀ ಜಾಗೃತಿಯಾಗಣ್ಣಾ...... ॥ ಪ ॥
ಪ್ರಾಣಿ ಪಕ್ಷಿಯಣ್ಣ ಅವಕ್ಕೆ ದಾರಿ ಯಾವುದಣ್ಣಾ
ಮೂಕ ಪ್ರಾಣಿಗಳ ಅಳಿವು ಉಳಿವುಗಳ ಯಾರು ಕೇಳ್ವರಣ್ಣಾ ॥ ಪ ॥

ಗ್ಯಾರಂಟಿ ರಾಮಣ್ಣ

# ಮಾನವರಾಗೋಣ......

ಮಾನವರಾಗೋಣ ಬನ್ನಿ ಮಾನವರಾಗೋಣ
ಮಾನವರಾಗೋಣ ನಾವು ಮಾನವರಾಗೋಣ ॥ ಪ ॥

ಭ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ
ಹಿಂದು ಮುಸಲ್ಮಾನ್ ಪಾರಸಿ ಕ್ರೈಸ್ತ
ಎಲ್ಲವೂ ಆಗಿ ಒಡಕಿಗೆ ಸಾಗಿ
ಬದುಕಿಯು ಸತ್ತು ಇರುವುದು ಸಾಕು ॥ ಪ ॥

ಅಡ್ಡಗೋಡೆಯನ್ನೊಡೆಯುತ್ತ ನಡೆದು
ಶೋಷಣೆ ಬೇರನು ಕಿತ್ತು ಎಸೆದು
ಸೋದರರೆಲ್ಲರೂ ಒಟ್ಟಾಗಿ ಕೂಡುತ್ತ
ಸವಿಯನ್ನೆಲ್ಲ ಸವಿಯುವ ಬನ್ನಿ ॥ ಪ ॥

ಎಲ್ಲರಿಗಿರಲಿ ನಿಲ್ಲಲು ನೆರಳು
ಎಲ್ಲ ಮಕ್ಕಳಿಗೂ ಕುಡಿಯಲು ಹಾಲು
ಹಾಸಲು ಹೊದಿಯಲು ಇರಲಿ ಬಟ್ಟೆ
ನೆಮ್ಮದಿ ಉಕ್ಕಲಿ ಎಲ್ಲರಿಗೆಂದೂ ॥ ಪ ॥

ಭೇದವನರಿಯದ ನೀಲಿಯ ಗಗನ
ಒಂದೇ ಮಣ್ಣಿಂದೆಲ್ಲರ ಜನನ
ಒಂದೇ ದಿಕ್ಕಿನಲೆಲ್ಲರ ಪಯಣ
ನುಡಿಯಲಿ ಮಿಡಿಯಲಿ ಅಂತಃಕರಣ ॥ ಪ ॥

ಜ. ಹೊ. ನಾ.

## ಈ ನಮ್ಮ ತಾಯ್‌ನಾಡು

ಈ ನಮ್ಮ ತಾಯ್ ನಾಡು
ನಿರುಪಮ ಲಾವಣ್ಯದ ಬೀಡು ॥ ಪ ॥

ಈ ವನದಲಿ ನಲಿದುಲಿವ
ಕೋಗಿಲೆಗಳು ನಾವು
ಕೋಗಿಲೆಗಳು ನಾವು ॥ ಪ ॥
ಲಲಲಲ ಲಲಲಲ ಲಲಲಲ ಲಲಲಲ ಲಾಲಾಲಾಲಾ ಲಾಲಾ...
ಲಲಲಲ ಲಲಲಲ ಲಲಲಲ ಲಲಲಲ ಲಾಲಾಲಾಲಾ ಲಾಲಾ...
ಪರ್ವತಗಳಲೇ ಹಿರಿಯ
ಆಗಸದಾ ನೆರೆಯ ಗೆಳೆಯ
ರಕ್ಷೆ ಅವನೆ ನಮಗೆ ಅವನೆ
ಪಾರ್ಗದರ್ಶಿ ಗುರಿಗೆ
ಮಾರ್ಗದರ್ಶಿ ಗುರಿಗೆ ॥ ಪ ॥

ಈ ತಾಯ ಮದಿಲಿನಲಿ
ಸಾಸಿರ ನದಿಗಳೇ ಹರಿವುವು
ಈ ಸುಂದರ ನಂದನಕೆ
ಆ ಸ್ವರ್ಗವೆ ಕರುಬುವುದು
ಈ ನೆಲದಾ ಧರ್ಮವೊಂಗೂ........
ಕಲಿಸದೂ ದ್ವೇಶವನೆಂದೂ........
ಭಾರತೀಯರು ನಾವು
ನಮ್ಮ ದೇಶ ಭರತ ನಾಡೂ....... ॥ ಪ ॥

# ಭೂಮಿ ಹುಟ್ಟಿದ್ದು ಹೇಗೆ ?

ಭೂಮಿ ಹುಟ್ಟಿದ್ದು
ಹೇಗೆ ? ಹೇಗೆ ? ಹೇಗೆ ?
ಬಹಳ ಆದಿ ಕಾಲದಲಿ
ಮಿಲಿಯ ವರುಷ ಹಿಂದಿನಲ್ಲಿ
ಭೂಮಿಯೆಂಬ ವಸ್ತು ಒಂದು
ಇರಲೇ ಇಲ್ಲ. ಇರಲೇ ಇಲ್ಲ.
ಹಾಗಾದರೆ ಭೂಮಿ ಹುಟ್ಟಿದ್ದು
ಹೇಗೆ ? ಹೇಗೆ ? ಹೇಗೆ ?
ಬ್ರಹ್ಮಾಂಡದಲ್ಲೆಲ್ಲ ನೆಬುಲವೆಂಬ ಅಗ್ನಿ ಗೋಳ
ಅನಿಲ ರಾಶಿ ಮುದ್ದೆ ಮದ್ದೆ
ಕೊತಕೊತನೆ ಕುದಿಯುತ್ತಿತ್ತು
ಒಂದಕ್ಕೊಂದು ತಾಕಲಾಟ ಎಡಬಿಡದ ಹೋರಾಟ
ಹ ಹು ಹ ಹು ಹ ಹು ಹ ಹು
ಢಮಾರ್................
ನೆಬುಲದಿಂದ ತುಂಡೊಂದು
ಸಿಡಿದು ಹೋಗಿ ದೂರ
ದೊಡ್ಡ ತುಂಡು ಸೂರ್ಯನಾಗಿ
ಚಿಕ್ಕತುಂಡು ಭೂಮಿಯಾಗಿ
ತನ್ನ ಸುತ್ತ ತಾನೆ ತಿರುಗಿ ತಣ್ಣಗಾಯಿತು
ಭೂಮಿ ಹುಟ್ಟಿದ್ದು ಹೀಗೆ ! ಹೀಗೆ !! ಹೀಗೆ !!!

ಐವನ್ ಡಿಸಿಲ್ವ.

# ಚಿಣ್ಣರ ಮೇಳ

ಲಲ.........ಲಲ..........ಲಲ
ಮಕ್ಕಳ ಮೇಳ ಇದಪ್ಪ
ಇದುವೆ ಚಿಣ್ಣರ ಮೇಳ ಕಣಪ ॥ ಪ ॥

ಮಕ್ಕಳೆಲ್ಲಾ ಕೂಡಿಕೊಂಡು
ಗೆಳೆಯರೆಲ್ಲಾ ಸೇರಿಕೊಂಡು
ಹೊಸ ಹೊಸ ಆಟಗಳ
ಕುಣಿದು ಕುಣಿದು ಕಲಿತರಪ್ಪ ॥ 1 ॥

ಆಟ ಅಂದ್ರೆ ಆಟವಪ್ಪ
ಹಾಡು ಅಂದ್ರೆ ಹಾಡ್ತಾರಪ್ಪ
ಚಿನ್ನದಂತ ಚಿಣ್ಣರೆಲ್ಲಾ
ನಗ್ತಾ ನಗಾತ ಕಲಿತರಪ್ಪ ॥ 2 ॥

ಸುತ್ತಮುತ್ತ ಪರಿಸರ
ನಮ್ಮ ಊರು, ಮಾಡಿಕಲಿ
ಗಣಿತದ ಲೆಕ್ಕಗಳ
ಸುಲಭದಲ್ಲಿ ಕಲಿತರಪ್ಪ ॥ 3 ॥

ಗುರುಗಳೆಲ್ಲಾ ಕೂಡಿಕೊಂಡು
ಚಿಣ್ಣರನ್ನು ಕರೆದುತಂದು
ಬೇದಭಾವ ಇಲ್ಲದಂತೆ
ಆಡಿಕೂಡಿ ಕಲಿತರಪ್ಪ ॥ 4 ॥

ಹೆಣ್ಣು ಗಂಡು ಒಂದೆ ಎಂದು
ಲಿಂಗಭೇದ ಇಲ್ಲದಂತೆ
ಸೋದರತೆಯ ಬೆಳೆಸಿಕೊಂಡು
ಸಮಾನತೆಯ ಕಲಿತರಪ್ಪ ॥ 5 ॥

ಕೆ. ಮಹದೇವು

## ಬಾರತ ಜ್ಞಾನ ವಿಜ್ಞಾನ ಸಮಿತಿಯ
## ಕರ್ನಾಟಕ ರಾಜ್ಯ

### ಪ್ರಕಟಣೆಗಳು

1. ಸಾಕ್ಷರತೆ ಏಕೆ ?
2. ಬಿ.ಜಿ.ವಿ.ಎಸ್ ಧ್ಯೇಯಗಳು, ಕನಸುಗಳು, ಗುರಿಗಳು, ಸಾಧನೆಗಳು.....
3. ಸಾಕ್ಷರತಾ ಆಂಧೋಲನದ ಕೈಪಿಡಿ
4. ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು
5. ನಮ್ಮ ಆರೋಗ್ಯ ನಮ್ಮ ಕೈಯಲ್ಲಿ
6. ಚಿಣ್ಣರ ಲೋಕ
7. ಬಳಕೆದಾರರೆ ಎಚ್ಚೆತ್ತುಕೊಳ್ಳಿ
8. ನಿಸರ್ಗ, ಸಮಾಜ , ವಿಜ್ಞಾನ
9. ಏಳು ಎಚ್ಚರವಾಗು
10. ಹೊತ್ತಿತೋ ಹೊತ್ತಿತೋ ಅಕ್ಷರದಾ ದೀಪ
11. ತಾಯಿ ಮತ್ತು ಮಗುವಿನ ಆರೋಗ್ಯ
12. ಕತ್ತಲೆ ಮತ್ತು ಬೆಳಕು
13. ಅತಿಬೇಧಿ
14. ಮುದ್ದು ಮಗು ನಿನ್ನ ನಗು
15. ಆರೋಗ್ಯ ಹೇಗೆ ? ಅನಾರೋಗ್ಯ ಏಕೆ ?
16. ಒಂದು ಮುಂಜಾನೆಯ ಜಾದು
17. ಜ್ಞಾನದ ಪರಂಪರೆ
18. ನಮ್ಮ ಸ್ವಾತಂತ್ರ್ಯ
19. ನಮ್ಮ ಸಮಾಜ ನಮ್ಮ ಜೀವನ
20. ನೀನು ಹುಟ್ಟಿದ್ದು ಹೇಗೆ ?
21. ಹೆಣ್ಣು ಮಗು ಹುಟ್ಟಿದೆ
22. ಹೇಲ್ ಬಾಪ್ ಧೂಮಕೇತು
23. ಪರಿಸರ ಪಯಣ
24. ಆಡಿ ಕಲಿಯೋಣ

## ಭಾರತ ಜ್ಞಾನ ವಿಜ್ಞಾನ ಸಮಿತಿಯ ಉದ್ದೇಶಗಳು

1. ಮೊದಲಿನಿಂದಲೂ ಜನರ ಬೆಂಬಲವನ್ನು ಸಂಪೂರ್ಣ ಸಾರ್ಕರತಾ ಆಂಧೋಲನಕ್ಕೆ ಒದಗಿಸಿಕೊಡುವುದು.
2. ಯೋಜನೆಯ ಎಲ್ಲಾ ಹಂತಗಳಲ್ಲೂ ಸಹಕರಿಸುವುದು - ಜನರನ್ನು, ಪರಿಸರವನ್ನು ಯೋಜನೆಯ ಸಹಾಯಕ್ಕೆ ತಿರುಗಿಸುವುದು - ತರಬೇತಿ ನೀಡುವುದು, ಜನರ ಬೆಂಬಲವನ್ನು ಬಲಗೊಳಸಿ ಕಾಯ್ದಿರಿಸುವುದು.
3. ಸತತವಾಗಿ ಅಧಿಕಾರಿಗಳ, ರಾಜಕಾರಣಿಗಳ, ಸ್ವಯಂ ಸೇವಾ ಸಂಘಗಳ, ಕಾರ್ಮಿಕ ಸಂಘಗಳ, ಬುದ್ಧಿಜೀವಿಗಳ ಸಂಪರ್ಕವಿಟ್ಟುಕೊಂಡು ಸಾಕ್ಷರತಾ ಆಂದೋಲನಕ್ಕೆ ಪ್ರೋತ್ಸಾಹ ಮತ್ತು ಸಹಾಯವನ್ನು ನೀಡುವುದು.
4. ಜಿಲ್ಲೆಗಳಲ್ಲಿ ಮತ್ತು ರಾಜ್ಯಗಳಲ್ಲಿ ಭಾರತ ಜ್ಞಾನ ವಿಜ್ಞಾನ ಸಮಿತಿಯ ಕೇಂದ್ರಗಳನ್ನು ತೆರೆದು ಸಾಕ್ಷಾರತಾ ಆಂದೋಲವನ್ನು ಸ್ಥಿರಗೊಳಿಸುವುದು, ಇದರಿಂದ ಸಾಕ್ಷರತಾ ಕಾರ್ಯಕ್ರಮದ ನಂತರವೂ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ, ಮಹಿಳೆಯರ ಅಭಿವೃದ್ಧಿ, ಆರೋಗ್ಯ ಸಾಂಸ್ಕೃತಿಕ ಜಾಗೃತಿ ಮುಂದುವರಿಸಲು ಸಹಾಯಮಾಡಲಾಗುವುದು. ಸಂಘಟನೆಗಳನ್ನು ರಚಿಸುವುದು ಮತ್ತು ಜನರೊಂದಿಗೆ ವಿಶ್ವಾಸದಿಂದ ಸಂಪರ್ಕ ಹೊಂದಿರುವುದು, ಪ್ರಜಾಪ್ರಭುತ್ವದಲ್ಲಿ ಜನರನ್ನು ಅಭಿವೃದ್ಧಿಯ ಕಡೆಗೆ ಸೆಳೆದೊಯ್ಯಲು ಸಹಾಯಕವಾಗುವುದು.

## ಚಿಣ್ಣರ ಮೇಳದ ಉದ್ದೇಶಗಳು

1. ಶಾಲಾ ಶಿಕ್ಷಣಕ್ಕೆ ಚೈತನ್ಯ ನೀಡುವುದು.
2. ಸಮುದಾಯವನ್ನು ಶಾಲಾ ಶಿಕ್ಷಣದಲ್ಲಿ ಪಾಲ್ಗೊಳ್ಳುವಂತೆ ಮಾಡುವುದು.
3. ಯುವ ಜನತೆಯಲ್ಲಿ ಸ್ವಯಂಸೇವಾ ಮನೋಭಾವವನ್ನು ಬೆಳೆಸಿ ಪ್ರೋತ್ಸಾಹಿಸುವುದು.
4. ಗ್ರಾಮೀಣ ಯುವಕರು, ಮತ್ತು ಮಕ್ಕಳನ್ನು ಸಂಘಟಿಸುವುದು.
5. ಮಕ್ಕಳಲ್ಲಿ ಭಾವೈಕ್ಯತೆ ಮೂಡಿಸುವುದು, ಪ್ರತಿಭೆ ಗುರುತಿಸುವುದು ಮತ್ತು ವಿಕಸನಗೊಳಿಸುವುದು.
6. ಶಿಕ್ಷಕ ವೃತ್ತಿಯ ದಕ್ಷತೆ ಹೆಚ್ಚಿಸುವುದು.